# ಎರಡು ಮಾತು

ಇದು ನನ್ನ ಮೊದಲ ಕೃತಿ. ನನ್ನೀಪ್ರಯತ್ನಕ್ಕೆ ಪ್ರೋತ್ಸಾಹ ನೀಡಿದ ನನ್ನ ಆತ್ಮೀಯ ಗೆಳೆಯರಿಗೂ, ಇದನ್ನು ಆಸ್ಥೆಯಿಂದ ಆದರಿಸಿ, ಪ್ರಕಟಣೆ ಮಾಡಿ ಪ್ರೋತ್ಸಾಹಿಸಿದ ಪೂರ್ಣಿಮಾ ಸಾಹಿತ್ಯ ಮಂದಿರದ ಪ್ರಕಾಶಕರಿಗೆ ನಾನು ಚಿರ ಋಣಿ.

ಶ್ರೀ ಚರಣ

# ೧

'ಡೆಕ್ಕನ್‌ಕ್ವೀನ್' ಗಾಡಿಯ ಫಸ್ಟ್‌ಕ್ಲಾಸ್ ಬೋಗಿಯೊಂದರ ಮೂಲೆಯಲ್ಲಿ ನಿವೃತ್ತ ನ್ಯಾಯಾಧೀಶ ಧರ್ಮಸಿಂಗ್‌ರವರು ವರ್ಜೀನಿಯಾಸಿಗಾರಿನ ಸುಖವನ್ನು ಅನುಭವಿಸುತ್ತ 'ಟೈಂಸ್ ಆಫ್ ಇಂಡಿಯಾ' ಪತ್ರಿಕೆಯನ್ನು ಓದುವುದರಲ್ಲಿ ತಲ್ಲೀನರಾಗಿದ್ದರು. ಮರುನಿಮಿಷದಲ್ಲಿ ಪತ್ರಿಕೆಯನ್ನು ಪಕ್ಕದಲ್ಲಿರಿಸಿ ಕಿಟಕಿಯಿಂದ ಹೊರಗೆ ತಲೆ ಹಾಕಿ ನೋಡಿದರು. ಗಾಡಿ 'ಕಲ್ಯಾಣ್' ಹತ್ತಿರಕ್ಕೆ ಬಂದಿತ್ತು. ಇನ್ನೂಸುಮಾರು ನಲವತ್ತು ನಿಮಿಷಗಳ ಪ್ರಯಾಣ ಉಳಿದಿತ್ತು. ಮತ್ತೆ ಅವರ ಮನಸ್ಸು 'ನೀಲದ್ವೀಪ'ದ ಕಡೆಗೆ ಹೊರಳಿತು. ನಾನಾ ಪತ್ರಿಕೆಗಳಲ್ಲಿ ನೀಲದ್ವೀಪದ ವಿಚಾರವಾಗಿ ಪ್ರಕಟವಾಗಿದ್ದ ಊಹಾಪೋಹಗಳನ್ನು ಮನನ ಮಾಡತೊಡಗಿದರು. ಯಾವನೋ ಒಬ್ಬ ಭಾರಿ ಕೋಟ್ಯಾಧೀಶ್ವರ ಅದನ್ನು ಕೊಂಡು ತನ್ನ ವಾಸಕ್ಕಾಗಿ ಅತ್ಯಂತ ಆಧುನಿಕ ಭವನವನ್ನು ಕಟ್ಟಿಸಿದ್ದನೆಂದು ತಿಳಿದುಬಂದಿತ್ತು. ಆದರೆ ಅವನ ನಾಲ್ಕನೇ ಹೆಂಡತಿಗೆ ಆ ದ್ವೀಪದ ವಾತಾವರಣ ಹಿಡಿಸಲಿಲ್ಲವಾಗಿ ಅದನ್ನು ಯಾರಿಗೋ ಮಾರಿಬಿಟ್ಟನೆಂದೂ ಸುದ್ದಿ ಹರಡಿತ್ತು. ಅದರ ಮಾರಾಟದ ಬಗ್ಗೆ ಅನೇಕ ಜಾಹೀರಾತುಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಅನಂತರ ಅದನ್ನು ಜಹಗೀರ್‌ದಾರ್ ಮಾಧವಸಾಹೇಬ್ ಎಂಬುವರು ಯಾರೋ ಕೊಂಡಿದ್ದಾರೆಂದು ಖಚಿತವಾಗಿ ಪ್ರಕಟಿಸಲಾಗಿತ್ತು. ಈ ಮಧ್ಯೆ ಪತ್ರಿಕೆಗಳಲ್ಲಿ ಊಹೆಗಳು ನಿಂತಿರಲಿಲ್ಲ. ಬೊಂಬಾಯಿನ ಚಿತ್ರರಂಗದ ನಟಿ ಕುಮಾರಿ ಶ್ರೀಮತಿ ಚಿತ್ರರಂಗದಿಂದ ನಿವೃತ್ತಳಾಗಿ ಉಳಿದ

ಕಾಲವನ್ನು ಸುಖವಾಗಿ ಕಳೆಯಬೇಕೆಂದು ನಿರ್ಧರಿಸಿ ಆ ದ್ವೀಪವನ್ನು ಕೊಂಡಿದ್ದಾಳೆಂದು ವದಂತಿ ಹಬ್ಬಿತ್ತು. ಕೆಲವು ಪತ್ರಿಕೆಗಳು, ಯಾವುದೋ ಕಂಪನಿ ಸಮುದ್ರಕ್ಕೆ ಸಂಬಂಧಿಸಿದ ಕೆಲವು ಉದ್ಯಮಗಳನ್ನು ಸ್ಥಾಪಿಸಲು ಆ ದ್ವೀಪವನ್ನು ಕೊಂಡಿದೆ ಎಂದು ಪ್ರಕಟಿಸಿದವು. ಕೊನೆಗೂ ಆ ದ್ವೀಪದ ಚರಿತ್ರೆ ರಹಸ್ಯವಾಗಿಯೇ ಉಳಿದಿತ್ತು.

ತಮ್ಮ ಉಲ್ಲನ್‌ಕೋಟಿನ ಒಳಜೋಬಿನಿಂದ ಒಂದು ಕಾಗದ ಎಳೆದು ಅದನ್ನು ಓದತೊಡಗಿದರು. ಆಗಲೇ ಅದನ್ನು ಮೂರು ನಾಲ್ಕು ಸಾರಿ ಓದಿದ್ದರು. ಆದರೂ ಮತ್ತೆ ಓದುವ ಹಂಬಲ. ಬರವಣಿಗೆ ಬಹಳ ಹೊಲಸಾಗಿತ್ತು, ಅಸ್ಪಷ್ಟವಾಗಿತ್ತು. ಆದರೆ ಅಲ್ಲಲ್ಲಿ ಕೆಲವು ಪದಪುಂಜಗಳು ಓದಲು ಸ್ಪಷ್ಟವಾಗಿದ್ದವು.

"ಮಾನ್ಯ ಧರ್ಮಸಿಂಗ್‌ರವರೆ......... ನಿಮ್ಮ ವಿಷಯ ಕೇಳಿ ಹಲವಾರು ವರ್ಷಗಳಾದವು.........ಖಂಡಿತ ನೀಲದ್ವೀಪಕ್ಕೆ ದಯಮಾಡಿಸಬೇಕು...... .... ಬಹಳ ಸುಂದರವಾದ ವಾತಾವರಣ...... ಮಾತನಾಡಬೇಕಾದ್ದು ಬಹಳವಾಗಿದೆ..........ಹಳೆಯ ಸವಿ ನೆನಪುಗರು........"

"ಬೇಸಿನ್‌ರೋಡ್ ಸ್ಟೇಷನ್‌ಬಳಿ ಎದುರುಗೊಳ್ಳಲಾಗುತ್ತದೆ." .....

ಇತಿ ಶ್ರೀಮತಿ ಲೀಲಾದೇವಿ.

"ಲೀಲಾದೇವಿ" ಅವರನ್ನು ಹಿಂದೆ ಯಾವಾಗ ಎಲ್ಲಿ ನೋಡಿದ್ದೆ? . ... " ಎಂಬ ಯೋಚನೆಯಲ್ಲಿ ಮಗ್ನರಾದರು ಧರ್ಮಸಿಂಗ್. ಎಂಟು ಹತ್ತು ವರ್ಷಗಳಾಗಿರಬೇಕು........ಆಗ ಅವರು ಯೂರೋಪಿನ ಪ್ರವಾಸಕ್ಕಾಗಿ ಹೊರಟಿದ್ದರು. ಆಮೇಲೆ ಅವರನ್ನು ನೋಡಿರಲಿಲ್ಲ. ಆಗಾಗ್ಗೆ ಆಸ್ಟ್ರೇಲಿಯಾದ ರೇಸ್‌ಕ್ಲಬ್ಬುಗಳಲ್ಲಿ ಅವರ ಹೆಸರು ಕೇಳಿಬರುತ್ತಿತ್ತು. ಅವರ ಪತಿ ಮಾಧವಸಾಹೇಬ್ ಪ್ರಖ್ಯಾತ ರೇಸ್‌ಕುದುರೆಗಳ ಮಾಲೀಕರು. ಆ ದಂಪತಿಗಳನ್ನು ಬೊಂಬಾಯಿನ ಅನೇಕ ಕ್ಲಬ್ಬುಗಳಲ್ಲಿ ಆಗಾಗ್ಗೆ ನೋಡಿದ್ದರು.

ಆದರೆ ನಿಕಟಸ್ನೇಹವೇನೂ ಬೆಳೆದಿರಲಿಲ್ಲ. ಅದೇ ಯೋಚನೆಯಲ್ಲಿ ಅವರು ತಲೆಯಲ್ಲಾಡಿಸುತ್ತಿದ್ದಂತೆ ಅವರನ್ನು ಗಾಢನಿದ್ರೆ ಆವರಿಸಿತು.

* * * *

ಆಶಾದೇವಿ ಮೂರನೇ ತರಗತಿ ಗಾಡಿಯೊಂದರಲ್ಲಿ ಯೋಚನಾ ಪರಳಾಗಿದ್ದಳು. ಗಾಡಿಯಲ್ಲಿ ಇನ್ನೂ ಐದಾರು ಪ್ರಯಾಣಿಕರಿದ್ದರು. ಅವರ ಮಾತುಗಳು ಅವಳ ಕಿವಿಗೆ ಬೀಳುತ್ತಿದ್ದರೂ ಅವಳಿಗೆ ಅವು ಬೇಕಿರಲಿಲ್ಲ. ವಾತಾವರಣ ಬಹಳ ಸೆಕೆಯಿಂದ ಕೂಡಿತ್ತು. "ಸಮುದ್ರದ ಮರಳಿನ ಮೇಲೆ ಎಷ್ಟು ಹಿತಕರವೊ....ಈ ಹೊತ್ತಿನಲ್ಲಿ" ಎನಿಸಿತು. ಬಹಳ ದಿನಗಳಿಂದ ಕೆಲಸಕ್ಕಾಗಿ ಅಲೆದಾಡುತ್ತಿದ್ದ ಅವಳಿಗೆ ಹಿಂದಿನದಿನತಾನೇ ಬಂದಿದ್ದ ಕಾಗದ ಬಹಳ ಉಲ್ಲಾಸವನ್ನು ತಂದುಕೊಟ್ಟಿತ್ತು. ಮತ್ತೆ ಮತ್ತೆ ಕಾಗದದ ಒಕ್ಕಣೆಯನ್ನು ಮನಸ್ಸಿನಲ್ಲೇ ಮೆಲುಕು ಹಾಕಿದಳು.

"ನಿಮ್ಮ ವಿಳಾಸವನ್ನು ಈಚೆಗೆ ನಾನು 'ಮಹಿಳಾಮಂಡಲಿ' ಯಿಂದ ಪಡೆದಿದ್ದೇನೆ. ಮಂಡಲಿಯ ಕಾರ್ಯದರ್ಶಿ ನಿಮ್ಮನ್ನು ನನ್ನ ಕಾರ್ಯದರ್ಶಿಯ ಸ್ಥಾನಕ್ಕೆ ಶಿಫಾರಸು ಮಾಡಿದ್ದಾರೆ. ಇದೇ ಏಪ್ರಿಲ್ 8 ನೇ ತಾರೀಕು ನೀವು ಈ ಹೊಸ ಪದವಿಯನ್ನು ಅಲಂಕರಿಸಲು ಹಾಜರಾಗುತ್ತೀರೆಂದು ನಂಬಿದ್ದೇನೆ. ಸಂಬಳ ಸಾರಿಗೆಗಳ ವಿಷಯ ನಿದಾನವಾಗಿ ಮಾತನಾಡಬಹುದು ನಿಮ್ಮನ್ನು 'ಬೇಸಿನ್‌ರೋಡ್' ಸ್ಟೇಷನ್ನಿನಲ್ಲಿ ಎದುರುಗೊಳ್ಳಲಾಗುತ್ತದೆ. ಇದರೊಡನೆ ಎರಡುನೂರು ರೂಪಾಯಿಗಳನ್ನು ನಿಮ್ಮ ಸದ್ಯದ ಖರ್ಚಿಗಾಗಿ ಕಳಿಸಿದ್ದೇನೆ.

ಇತಿ ನಿಮ್ಮ,
ಶ್ರೀಮತಿ ಲೀಲಾವತಿ ಮಾಧವನ್
ನೀಲದ್ವೀಪ

"ನೀಲದ್ವೀಪ" ಪತ್ರಿಕೆಗಳಲ್ಲಿ ಅದರ ಹೆಸರು ಕೇಳಿದ್ದಳು. ಅದರ ಒಡೆಯ ಭಾರೀ ಕೋಟ್ಯಾಧೀಶ್ವರನೆಂದೂ, ಅದರಲ್ಲಿ ಅತ್ಯಂತ ವೈಭವಯುತ ಭವನವನ್ನು ತನ್ನ ವಿಹಾರಕ್ಕಾಗಿ ಕಟ್ಟಿಸಿಕೊಂಡಿದ್ದಾನೆಂದೂ ಕೇಳಿ

ರೂಗಳು....ಎಂತಹ ಸುಸಂಧಿ ..." ಅವನ ಮುಖದಲ್ಲಿ ಉತ್ಸಾಹ ಆನಂದಗಳ ರೇಖೆಗಳು ಸ್ಪಷ್ಟವಾಗಿ ಮೂಡಿದವು.

*  *  *  *

ಮೆಟ್ರೋ ಹೋಟೆಲಿನ ಸುಂದರವಾದ ವಾತಾವರಣ. ಸಾಯಂಕಾಲ 5 ಗಂಟೆಯ ಸಮಯ. ಜನರ ಗಲಾಟೆಗೆ ಮಿತಿಯಿರಲಿಲ್ಲ. ಆ ಗುಂಪಿನ ಮಧ್ಯೆ ಒಂದು ಮೂಲೆಯಲ್ಲಿನ ಮೇಜಿನ ಮುಂದೆ ಮಿಸ್, ಸುಧಾ ಬಿಂದೂ, ಉಪಾಹಾರದಲ್ಲಿ ತೊಡಗಿದ್ದರು. ಹಾಗೆಯೇ ಅವರ ಮನಸ್ಸು ತಮ್ಮ ಹಿಂದಿನ ನಲ್ವತ್ತು ವರ್ಷಗಳ ಜೀವನದ ಸವಿ ನೆನಪುಗಳತ್ತ ಹರಿಯಿತು. ಕಳೆದ ವರ್ಷದ ಬೇಸಗೆಯ ನೆನಪು ಅವರಿಗೆ ಬಹಳ ಹಿತವೆನಿಸಿತು. ಆ ಬೇಸಗೆಯನ್ನು ಅವರು ಕಳೆದದ್ದು ಊಟಿಯಲ್ಲಿ. ಯಾರೋ ಸ್ನೇಹಿತರ ಸಹವಾಸದಿಂದ ಆ ಪುಣ್ಯ ಲಭಿಸಿತ್ತು. ಇಲ್ಲದಿದ್ದರೆ ಅಲ್ಲಿಗೆ ಹೋಗಿ ಎರಡು ತಿಂಗಳ ಕಾಲ ಸುಖವಾಗಿ ಮೈಮರೆಯಲು ಸಾಧ್ಯವಾಗುತ್ತಿತ್ತೆ ? ಈ ವರ್ಷದ ಬೇಸಗೆಯ ರೀತಿಯೇ ಬೇರೆ. ಒಂದು ಹೊಸ ಪ್ರದೇಶ...... .. ಹೊಸ ವಾತಾವರಣ. ಹಳೆಯ ಸ್ನೇಹಿತರೊಡನೆ, ನೀಲದ್ವೀಪದಲ್ಲಿ ಎರಡು ಮೂರು ದಿನಗಳ ಹಿಂದೆ ಬಂದಿದ್ದ ಕಾಗದ ಅವರಿಗೆ ಉಲ್ಲಾಸವನ್ನು ತಂದಿತ್ತು.

"ಶ್ರೀಮತಿ ಸುಧಾದೇವಿ .........ನೀವು ನನ್ನನ್ನು ಮರೆತಿರಲಾರಿರಿ ಎಂದು ಭಾವಿಸುತ್ತೇನೆ.... ... ಈಗ್ಗೆ ಸುಮಾರು ಹದಿನೈದು ವರ್ಷಗಳ ಹಿಂದೆ ನಾವಿಬ್ಬರೂ ಪೂನಾದಲ್ಲಿ ಒಟ್ಟಿಗೆ ಕೆಲವಾರು ದಿನಗಳನ್ನು ಆನಂದವಾಗಿ ಕಳೆಯಲಿಲ್ಲವೆ ?........ ಆನಂದ ವಿಹಾರ ಭವನದಲ್ಲಿ ಆ ಸುಂದರವಾದ ತೋಟ.........ಮಧ್ಯೆ ರಮಣೀಯವಾದ ಕೊಳ.........ನೆನಪಿರಬಹುದು.... ಮತ್ತೆ ಒಂದು ಬಾರಿ .......ಸುಮಾರು 8-10 ವರ್ಷಗಳ ಹಿಂದೆ......... ಮೈಸೂರಿನಲ್ಲಿ... ....ದಸರಾ ದಿನಗಳಲ್ಲಿ.........ಆ ಕಾಲ ಚೆನ್ನಾಗಿತ್ತು. ಅಂತಹ ಅವಕಾಶ ಮತ್ತೆ ದೊರತಿದೆ. ನಮ್ಮವರೇ ಒಂದು ವಿಹಾರ ಭವನವನ್ನು ಆರಂಭಿಸಿದ್ದಾರೆ. ನನಗೆ ಅಲ್ಲಿ ಪೂರ್ಣಸ್ವಾತಂತ್ರ್ಯವಿದೆ. ನೀವು ಒಂದು ಕಾಸೂ ಖರ್ಚಿಲ್ಲದೆ ಬೇಸಗೆಯನ್ನು ಸುಖವಾಗಿ ಕಳೆಯಬಹುದು. ಬಹಳ ಹಿತವಾದ ಹವ. ನೀಲದ್ವೀಪದ ಭವ್ಯವಾದ ಮಹಲು. ಆನಂದದ ಜೀವನ.

ಇದೇ ಏಪ್ರಿಲ್ ಎರಡನೇ ವಾರದಲ್ಲಿ........8 ನೇ ತಾರೀಕು... ....ಆಗ ಬಹುದಲ್ಲವೆ ?"

ಇತಿ ನಿಮ್ಮವಳೇ ಆದ........

ಕಾಗದದ ಕೆಳಗೆ ರುಜು ಗೀಚಲಾಗಿತ್ತು. "ನೀಲಾಯಾದವ್" ಇರ ಬಹುದೆ ? ಅಥವಾ ಲೀಲಾನೋ..........ಅಲ್ಲ. ಲೈಲಾಮಧು ಇರಬೇಕು.... ಹೌದು....ಅಂದಹಾಗೆ ಲೈಲಾನ್ನ ಹಿಂದೆ ನಾನೆಲ್ಲಿ ನೋಡಿದ್ದೆ ?........ ಯಾವಾಗ ? ಮರೆತು ಹೋಗಿದೆ. ಪೂನಾದ ಆನಂದ ವಿಹಾರ ಭವನದ ಚಿತ್ರ ಅಸ್ಪಷ್ಟವಾಗಿ ಮೂಡಿತು. ನೀಲದ್ವಿಪವನ್ನು ಯಾರೋ ಸಿನಿಮಾ ನಟಿ ಕೊಂಡಿರಲಿಲ್ಲವೆ ?......ಮತ್ತೆ ಇದೇನು ? ಅಥವಾ ಮನಸ್ಸಿಗೆ ಹಿಡಿಸದೆ ಮಾರಿದ್ದರೂ ಮಾರಿರಬಹುದು. ಲಕ್ಷಾಧೀಶ್ವರರ ಮನಸ್ಸು ಯಾವುದನ್ನೂ ಒಪ್ಪದು. ಸರಿ.... ನೀಲದ್ವೀಪ....ಲೈಲಾಳ ಭೇಟಿ....ಒಳ್ಳೆಯ ಅವಕಾಶ....

ಫಲಾಹಾರದ ಬಿಲ್ ಬಂದಾಗಲೇ ಅವರಿಗೆ ಎಚ್ಚರವಾದದ್ದು.

*　　*　　*　　*

ರಿಟೈರ್ಡ್ ಲಿಫ್ಟಿನೆಂಟ್ ಜನರಲ್ ಗೋವಿಂದನಾಯರ್ ಮಾತುಂಗಾದ ತಮ್ಮ ಮನೆಯ ಹಿಂದಿನ ಸಣ್ಣ ತೋಟದಲ್ಲಿ ತಿರುಗಾಡುತ್ತಿದ್ದರು. ಬೆಳಿಗ್ಗೆಯಿಂದಲೂ ಅವರು ಈ ಮಾಧವನ್ ಯಾರು ಎಂಬ ಯೋಚನೆಯಲ್ಲಿ ಮುಳುಗಿದ್ದರು. ಅವರನ್ನು ನಾನು ನೋಡಿದ್ದೇನೆಯೇ ?...ನನ್ನ ಸ್ನೇಹಿತರ ಪರಿಚಯ ಅವರಿಗಿರುವಂತಿದೆ. ಕ್ಯಾ । ಕೃಷ್ಣಸಿಂಗ್..... ಕ್ಯಾ । ಅಬ್ಬಾಸ್ ....ಕ್ಯಾ । ಮೆನನ್......ಜ । ಮೆಹತ....ಎಲ್ಲರ ಪರಿಚಯವೂ ಅವರಿಗಿದೆ.... "ನಿಮ್ಮ ಆತ್ಮೀಯ ಸ್ನೇಹಿತರಲ್ಲಿ ಕೆಲವರಾದರೂ ಬರುವುದು ಖಂಡಿತ" ಎಂದು ಬರೆದಿರುವುದನ್ನು ನೋಡಿದರೆ....ಖಂಡಿತ ಈ ಅವಕಾಶವನ್ನು ಕಳೆದುಕೊಳ್ಳಬಾರದು. 20-30 ವರ್ಷಗಳ ಹಿಂದಿನ ಜೀವನದ ಸವಿ ನೆನವುಗಳನ್ನು ಮತ್ತೆ ಸ್ನೇಹಿತರೊಡನೆ ಸವಿಯಬಹುದು. ಮೊದಲನೆ ಮಹಾಯುದ್ಧದ ಮಿಲಿಟರಿ ಕ್ಯಾಂಪುಗಳು......ಆಹಾ....ಮತ್ತೆ ಆ ಸಾಹಸ ಜೀವನದ ಅನುಭವ. ಆದರೆ ಈ ಮಾಧವನ್ ಯಾರು ? ಸರಿ....ಸರಿ....ಕ್ಯಾ । ಬಲವಂತನ ಸ್ನೇಹಿತನಿರಬೇಕು. ಅಂದಹಾಗೆ ಬಲವಂತ್ ಎಲ್ಲಿರಬಹುದು ?......ಅವನೂ

ಅಲ್ಲಿಗೆ ಬರಬಹುದು.... ಖಂಡಿತ ಬರುತ್ತಾನೆ.... ನೀಲದ್ವೀಪ.... ಅಲ್ಲಿನ ಮಿತ್ರರ ಕೂಟ ಭವ್ಯ ಮಹಲಿನಲ್ಲಿ ಹಬ್ಬದೂಟ..... ಮರೆಯಲಾಗದ ಆನಂದ ..... ಇದೇ 8 ನೇ ತಾರೀಕಲ್ಲವೆ ? ಸರಿ .... ಸರಿ...."

ಕೂಡಲೇ ನೀಲದ್ವೀಪದ ಪ್ರಯಾಣಕ್ಕೆ ಸಿದ್ಧರಾಗಬೇಕೆಂದು ನಿರ್ಧರಿಸಿದ ಗೋವಿಂದನಾಯರ್ ಮನೆಯ ಒಳಗೆ ನುಗ್ಗಿದರು.

*　　*　　*　　*

ಡಾ|| ಆನಂದರಾಜ್ ತನ್ನ ಔಷಧಾಲಯದ ಲ್ಯಾಬರೋಟರಿಯಲ್ಲಿ ಔಷಧಿಗಳನ್ನು ಸಿದ್ಧಪಡಿಸುವುದರಲ್ಲಿ ಮಗ್ನನಾಗಿದ್ದ. ಹೊರಗಡೆ ತನ್ನ ಔಷಧಿಗಾಗಿ ಯಾರೋ ಇಬ್ಬರು ಕೂಲಿಗಳು ಕಾದಿದ್ದರು. ಇಂತಹವರಿಂದ ತನಗೆ ಹೆಚ್ಚು ಪ್ರಯೋಜನವಿಲ್ಲವೆಂದು ಅವನಿಗೆ ತಿಳಿದಿತ್ತು. ಆದರೆ ಅವನ ಸಧ್ಯದ ಪರಿಸ್ಥಿತಿಯಲ್ಲಿ ಅವರನ್ನೂ ತಿರಸ್ಕರಿಸುವಂತಿರಲಿಲ್ಲ. ಒಂದೆರಡು ರೂಪಾಯಿಗಳು ಬಂದರೆ ಅಷ್ಟೇ ಸಾಕು ಎನಿಸುತ್ತಿತ್ತು. ಕಷ್ಟಪಟ್ಟು M. B. B. S. ಓದಿದ್ದೆಲ್ಲಾ ವ್ಯರ್ಥವಾಯ್ತೆ ?.... ತನ್ನ ವೃತ್ತಿಯಲ್ಲಿ ಅವನೇನೂ ತಿಳಿಯದವನಲ್ಲ. ಗಟ್ಟಿಗನೇ ... ಆದರೆ ಜೊತೆಗೆ ಅದೃಷ್ಟ ಒಂದಿಲ್ಲದಿದ್ದರೆ ಏನೂ ಪ್ರಯೋಜನವಿಲ್ಲ. ಮೂರು ನಾಲ್ಕು ವರ್ಷಗಳ ಹಿಂದೆ ಅವನು ಒಳ್ಳೆಯ ಸ್ಥಿತಿಯಲ್ಲೇ ಇದ್ದ. ನಗರದ ಪ್ರಸಿದ್ಧ ವೈದ್ಯರೊಬ್ಬರ ಸಹಾಯಕನಾಗಿದ್ದಾಗ ತಿಂಗಳಿಗೆ ಐನೂರು ರೂಗಳ ಸಂಬಳವಲ್ಲದೆ ಮೇಲೆ ನೂರಾರು ರೂಗಳ ಸಂಪಾದನೆಯಿತ್ತು. ಆದರೆ ಯಾವುದೋ ಸಂದರ್ಭದಲ್ಲಿ ತನ್ನ ಒಡೆಯನಿಗೆ ವಿರೋಧವಾಗಿ ಕೆಲಸವನ್ನು ಕಳೆದುಕೊಂಡು ತನ್ನದೇ ಸ್ವಂತ ಔಷಧಾಲಯವನ್ನು ಆರಂಭಿಸಿದ್ದ. ಮತ್ತೆ ಈಗ ಅವನಿಗೆ ಅದೃಷ್ಟ ಒಲಿದು ಬಂದಿತ್ತು. ಭಾರೀ ಶ್ರೀಮಂತನೊಬ್ಬನ ಪತ್ನಿಗೆ ಚಿಕಿತ್ಸೆ ನಡೆಸಬೇಕಾಗಿತ್ತು. ಒಂದೆರಡು ತಿಂಗಳ ಚಿಕಿತ್ಸೆ, ಮೂರುಸಾವಿರ ರೂಗಳವರೆಗೂ ಸಂಭಾವನೆ ಬರಬಹುದು. ಅಲ್ಲದೆ ಚಿಕಿತ್ಸಾ ಕಾಲದಲ್ಲಿ ಅವನ ಸಮಸ್ತ ಖರ್ಚು ಅವರಿಗೇ ಸೇರಿದ್ದು. ಮುಂದೆ ಅವರ ಶಿಫಾರಿಸಿನ ಮೇಲೆ ಸಮಾಜದಲ್ಲಿ ಉನ್ನತ ಪದವಿಗಳಿಸಬಹುದು. 250 ರೂಗಳ ಚೆಕ್ಕಿನೊಂದಿಗೆ ಕಾಗದ ಬಂದಿತ್ತು. ಬೊಂಬಾಯಿನಿಂದ ಅಷ್ಟೇನೂ ದೂರವಲ್ಲದ ಪ್ರದೇಶ...."ಬೇಸಿನ್‌ರೋಡ್" ಸ್ಟೇಷನ್ನಿ

ನಿಂದ ಮೂರು ನಾಲ್ಕು ಮೈಲಿ "ರಾಂಗಾವ್" ಅಲ್ಲಿಂದ ಒಂದು ಮೈಲಿ ದೂರದಲ್ಲಿ ನೀಲದ್ವೀಪ......ಅಲ್ಲಿ ತನ್ನ ಅದೃಷ್ಟ ತನಗಾಗಿ ಕಾದಿದೆ. ಮೂರು ಸಾವಿರ ರೂಗಳು! . . ಅವನ ಮುಖದಲ್ಲಿ ಗೆಲುವಿನ ರೇಖೆಗಳು ಒಡಮೂಡಿದವು. "ಸಾರ್ ಹೊತ್ತಾಯ್ತು, ಔಷಧಿ" ಎಂದು ಹೊರಗಡೆಯಿಂದ ಕೂಗು. ಆಗಲೇ ಅವನಿಗೆ ಎಚ್ಚರ.

* * * *

ಕಿಷನ್‌ಚಂದ್ ಡ್ರಾಯಿಂಗರೂಮಿನ ನಿಲುವುಗನ್ನಡಿ ಎದುರು ನಿಂತು ಮೇಜಿನ ಡ್ರಾಯರಿನಿಂದ ಒಂದು ಸಣ್ಣ ಪುಸ್ತಕವನ್ನು ತೆಗೆದು ತಾನೇ ಗುರ್ತಿಸಿದ್ದ ಹೆಸರುಗಳನ್ನು ಓದತೊಡಗಿದ "ಆಶಾದೇವಿ......ಕ್ಯಾ। ಅಜಯ ಕುಮಾರ್, ಮಿಸ್। ಸುಧಾದೇವಿ......ಜ। ಗೋವಿಂದನಾಯರ್......ಜಸ್ಟಿಸ್ ಧರ್ಮಸಿಂಗ್ ಡಾ॥ ಆನಂದರಾಜ್.... ಅತಿಥಿಗಳ ಸತ್ಕಾರಕ್ಕೆ ನಿಯಮಿಸಲ್ಪಟ್ಟಿರುವ ದಂಪತಿಗಳು, ಮಂಗಳೂರು ಕಡೆಯ ಶಿವರಾಮ ಕಾರ್ಕಳ ಮತ್ತು ಸರೋಜಮ್ಮ. ಪುಸ್ತಕವನ್ನು ಮುಚ್ಚಿ ಜೋಬಿಗೆ ತುರುಕಿಕೊಂಡು ಯೋಚಿಸತೊಡಗಿದ. "ಇವರೆಲ್ಲ ಯಾರು ? ಯಾತಕ್ಕಾಗಿ ನಾನು ಇವರ ಮೇಲೆ ಕಣ್ಣಿಡಬೇಕು ? ಒಬ್ಬರಿಗಿಂತ ಒಬ್ಬರು ಘಟಂಗರಿರಬೇಕು. ಇರಲಿ, ನನ್ನಪಾಲಿನ ಕೆಲಸ ನಾನು ಮಾಡಿದರಾಯ್ತು, ಎಂತಹವರೇ ಆಗಿರಲಿ ನನ್ನ ಕಣ್ಣಿಗೆ ಮಣ್ಣೆರಚಲು ಸಾಧ್ಯವಿಲ್ಲ.....ಕಳ್ಳನನ್ನು ಹಿಡಿಯುವುದು ಅಷ್ಟೇನೂ ಕಷ್ಟವಾಗಲಾರದು. ಯಾವ ವೇಷದಲ್ಲಿ ಹೋದರೆ ಸುಲಭ ?......ಮಿಲಿಟರಿ ಜನರಲ್? ಛೆ ! ಬೇಡ ಗುಂಪಿನಲ್ಲೇ ಒಬ್ಬ ಜನರಲ್ ಇದ್ದಾನೆ.... ಡಾಕ್ಟರ್? ಉಹ್ಞೂ ... ಆನಂದರಾಜ್ ಇದ್ದಾನೆ......ಲಾಯರ್ ? ಛೆ! ಜಸ್ಟಿಸ್ ಧರ್ಮಸಿಂಗ್ ಎದುರಿಗೆ ಆ ವೇಷ ಕಷ್ಟ. ಹಾಗಾದರೆ ಯಾವ ವೇಷ? ಸರಿ ... ಸರಿ ......ಅಸ್ಸಾಂ ಟೀತೋಟದ ಅಧಿಕಾರಿ ? ... ಸರಿ ಅದೇ ಸರಿ.....ಆದರೆ ಇವರೆ ಏನು ತಪ್ಪು ಮಾಡಿರಬಹುದು ?.... ಯಾರಿಗೆ ಗೊತ್ತು ! ಸಾಹೇಬನ ಆಭರಣಗಳ ಮೇಲೆ ಕಣ್ಣಿಟ್ಟಿದ್ದಾರೋ ಅಥವಾ ಅವನ ವಿಲ್ಲನ್ನೇ ಹೊಡೆಯಲು ಅವರಲ್ಲಿ ಯಾರಾದರೂ ಯತ್ನಿಸಿರಬಹುದು. ಇಲ್ಲದಿದ್ದರೆ ಅಲ್ಲಿ ನನಗೇನು ಕೆಲಸ ? ಆ ಒಂಟಿ ದ್ವೀಪದಲ್ಲಿ? "ನೀಲದ್ವೀಪ" ಅಲ್ಲಿ ಎಲ್ಲ ನೀಲಿಯಾಗಿರ

ಬಹುದೆ ? ಅವನು ರಾಗದ್ವೀಪದ ಹೆಸರನ್ನು ಕೇಳಿದ್ದ. ನೀಲದ್ವೀಪದ ಹೆಸರು ಅವನಿಗೆ ಹೊಸದು. ಅಥವಾ ಅದೇ ಇದಾಗಿರಬಹುದೆ ? ಇರಬಹುದು...... ಸತ್ಯಾಂಶ ಅವನಿಗೆ ಗೊತ್ತಿರಲಿಲ್ಲ. ಮಾಧವನ್‌ರವರಿಂದ ಬಂದಿರುವ ಇನ್ನೂರು ರೂಗಳ ಚೆಕ್ಕು ಮಾತ್ರ ತನ್ನ ಜೇಬಿನಲ್ಲಿರುವುದು ಸತ್ಯ ಎಂದು ಅವನಿಗೆ ತಿಳಿದಿತ್ತು.

* * * *

## ೨

"ಬೇಸಿನ್‌ರೋಡ್" ಸ್ಟೇಷನ್ ಹೊರಗಡೆ ಒಂದು ಸಣ್ಣ ಗುಂಪಿನ ಮೂರು ನಾಲ್ಕು ಜನರು ತಾತ್ಕಾಲಿಕ ಆ ನಿರ್ಧರಕ್ಕೆ ಗುರಿಯಾಗಿ ನಿಂತಿದ್ದರು. ಅವರ ಸಾಮಾನುಗಳನ್ನು ತಲೆಯ ಮೇಲೆ ಹೊತ್ತು ನಿಂತ ಕೂಲಿಗಳು ಅವರ ಹಿಂದೆ ನಿಂತಿದ್ದರು. ಅವರಲ್ಲೊಬ್ಬ "ಚಂದೂ"ಎಂದು ಕೂಗಿದ. ಅಲ್ಲೇ ನಿಂತಿದ್ದ ಟ್ಯಾಕ್ಸಿಗಳ ಪೈಕಿ ಒಂದರ ಡ್ರೈವರ್ ಹತ್ತಿರಕ್ಕೆ ಓಡಿ ಬಂದು "ನೀಲದ್ವೀಪಕ್ಕೆ ಹೋಗುವವರು ಇದ್ದಾರೆಯೇ" ಎಂದ. "ಹೌದು" ಎಂದು ನಾಲ್ಕು ಜನರ ಬಾಯಿಂದ ಒಟ್ಟಿಗೇ ಹೊರಬಿತ್ತು. ಕೂಡಲೇ ನಾಲ್ವರೂ ಪರಸ್ಪರ ದೃಷ್ಟಿಸಿ ನೋಡಿದರು. ಚಂದೂ ಧರ್ಮಸಿಂಗರ ಕಡೆಗೆ ತಿರುಗಿ ಹೇಳಿದ. "ಇಲ್ಲಿರುವ ಎರಡು ಟ್ಯಾಕ್ಸಿಗಳಲ್ಲಿ ಒಂದು ಇನ್ನೊಂದು ವೈಲಿಗಾಗಿ ಕಾಯಬೇಕಾಗಿದೆ. ಆದ್ದರಿಂದ ನಿಮ್ಮಲ್ಲಿ ಯಾರಾದರೂ ಒಬ್ಬರು ಸ್ವಲ್ಪ ಹೊತ್ತು....ಅರ್ಧಗಂಟೆಯಾಗಬಹುದು.....ಕಾಯಬೇಕು ಸಾರ್...... ನಿಮಗೂ ಅದು ಅನುಕೂಲವೆ"

ಆಶಾದೇವಿ ಉಳಿದ ಮೂವರ ಕಡೆಗೆ ತಿರುಗಿ "ನಾನೇ ಸ್ವಲ್ಪ ಹೊತ್ತು ಕಾದಿರುತ್ತೇನೆ......ನೀವು ಮೂವರೂ ಹೋಗಬಹುದು" ಎಂದಳು. ಸುಧಾದೇವಿ "ಥ್ಯಾಂಕ್ಸ್....ನಾನು ಎಷ್ಟಾದರೂ ವಯಸ್ಸಾದವಳು. ಕಾದು ಕೂತಿರಲು ನನಗೆ ಸಾಧ್ಯವಿಲ್ಲ" ಎನ್ನುತ್ತಾ ಟ್ಯಾಕ್ಸಿಯ ಒಳಗೆ ಹೋಗಿ ಕೂತಳು. ಧರ್ಮಸಿಂಗ್ ಅವಳನ್ನು ಹಿಂಬಾಲಿಸಿದರು.

ಅಜಯಕುಮಾರ್, "ನಾನು ಶ್ರೀಮತಿ......" ಎನ್ನುತ್ತಾ ಆಶಾದೇವಿಯ ಕಡೆಗೆ ತಿರುಗಿದ. "ಆಶಾ" ಎಂದಳು ಆಶಾದೇವಿ.

"ಆ್ಞ.....ಆಶಾದೇವಿಯೊಡನೆ ಕಾದಿರುತ್ತೀನಿ" ಎಂದ.

"ಸರಿ....ಅವರಿಗೂ ಬೇಸರವಾಗಬಹುದು. ಜೊತೆಗೆ ಇದ್ದರೆ ವಾಸಿ," ಎಂದಳು ಸುಧಾ. ಕೂಲಿಗಳು ಕಾರಿಗೆ ಸಾಮಾನುಗಳನ್ನು ತುಂಬಿದರು.

ಕಾರೊಳಗೆ. ಧರ್ಮಸಿಂಗ್ ಪ್ರಶ್ನಿಸಿದರು "ಹವಾ....ಚೆನ್ನಾಗಿದೆ...... ನೀವು ಈ ಕಡೆ ಯಾವಾಗಲಾದರೂ ಸುತ್ತಾಡಿದ್ದೀರಾ ? ಅಂದ ಹಾಗೆ ನಿಮ್ಮ ಹೆಸರು ?"

"ನನ್ನ ಹೆಸರೇ.....ಸುಧಾದೇವಿ ಬಿಂದೂ" ಸುಧಾ ಹೆಚ್ಚು ಮಾತಾಡ ಲಿಲ್ಲ. ಕಾರು ಕದಲಿತು.

ಆಶಾದೇವಿ ಅಜಯಕುಮಾರನನ್ನು ಕುತೂಹಲ ದೃಷ್ಟಿಯಿಂದ ನೋಡಿದಳು. ಅವನು ಏನೂ ತೋಚದೆ "ನನ್ನ ಹೆಸರು......ಅಜಯ ಕುಮಾರ್," ಕ್ಷಣಕಾಲ ತಡೆದು, "ಹಾಳಾದ್ದು ಬೇಸಗೆ....ಶಿಖೆ ತಡೆಯು ವುದೇ ಕಷ್ಟ .. ದ್ವೀಪದಲ್ಲಿ ಹವ ಹಿತಕರವಾಗಿರಬಹುದು .. ಅಂದಹಾಗೆ ಈ ಕಡೆ ಹಳ್ಳಿಗಳ ಪರಿಚಯ ನಿಮಗಿದೆಯೆ ?" ಎಂದ.

"ಸ್ವಲ್ಪವೂ ಇಲ್ಲ." ತನ್ನ ನೂತನ ಪದವಿಯನ್ನು ಸೂಚಿಸುವ ಉದ್ದೇಶದಿಂದ "ನಾನು ನನ್ನ ಯಜಮಾನಿಯನ್ನು ಸಹ ಇನ್ನೂ ನೋಡಿಲ್ಲ" ಎಂದಳು.

"ನಿಮ್ಮ ಯಜಮಾನಿ !....ಅಂದರೆ .. ನನಗೆ ಅರ್ಥವಾಗಲಿಲ್ಲ"

"ಹೌದು. ನಾನು ಈ ಮಾಧವಸಾಹೇಬರ ರಾಣಿಗೆ ಕಾರ್ಯದರ್ಶಿ...... ಇದೇ ಈಗ ತಾನೇ ಕೆಲಸ ವಹಿಸಿಕೊಳ್ಳಲು ಹೊರಟದ್ದೀನಿ"

"ಓಹೋ. ಬಹಳ ಸಂತೋಷ ಒಳ್ಳೆಯ ಛಾನ್ಸ್"

"ಆದರೆ....ಇದು ನನಗೇ ಇಷ್ಟವಿಲ್ಲ....ಕೇವಲ ತಾತ್ಕಾಲಿಕ ಗರ್ಲ್ಸ್‌ಸ್ಕೂಲ್ ಒಂದರಲ್ಲಿ ಹೆಡ್‌ಮಿಸ್ಟ್ರೆಸ್ ಕೆಲಸ ಖಾಯಂ ಆಗಿ ಸಿಗು ವಂತಿದೆ.....ಅಲ್ಲಿಯವರೆಗೂ ಅಷ್ಟೆ....ನೀಲದ್ವೀಪ ಬಹಳ ಸುಂದರವಾಗಿದೆ ಎಂದು ಕೇಳಿದ್ದೇನೆ. ನೀವೇನಾದರೂ ಅದನ್ನು....."

ಆಶಾಮಾತು ಮುಗಿಸುವ ಮುನ್ನ ಅಜಯ ನಗುತ್ತ "ನಾನೆಲ್ಲಿ ನೋಡ ಬೇಕು ?......ಇನ್ನು ಮೇಲೆ ತಾನೆ . " ಎಂದ.

ಅವರು ನಿರೀಕ್ಷಿಸಿದಿಕ್ಕಿಂತ ಬೇಗ ರೈಲು ಬಂದು ನಿಂತಿತು. ನಾಲ್ಕಾರು ಪ್ರಯಾಣಿಕರು ಇಳಿದು ಹೊರಬಂದು ನಿಂತರು. ಅವರಲ್ಲಿ ಒಬ್ಬರು ಎತ್ತರ ವಾದ, ಬಲವಾದ ಮೈಕಟ್ಟಿನಿಂದ ಕೂಡಿದ್ದು, ಮಿಲಿಟರಿ ಜನರಲ್ ಅಂತೆ ಇದ್ದರು. ಅವರ ಕೂಲಿ ದೂರದಿಂದಲೇ ಆಶಾ ಮತ್ತು ಅಜಯರ ಕಡೆಗೆ ಕೈ ಮಾಡಿ ತೋರಿಸಿದ. ಅವರು ನಿದಾನವಾಗಿ ಹತ್ತಿರಕ್ಕೆ ಬರುತ್ತಿದ್ದಂತೆಯೇ ಆಶಾ, "ನಮಸ್ಕಾರ.....ನಾನು ಶ್ರೀಮತಿ ಮಾಧವನ್ ರವರ ನೂತನ ಕಾರ್ಯ ದರ್ಶಿ ... ಇವರುಕ್ಯಾ ! ಅಜಯಕುಮಾರ್... ನಿಮಗಾಗಿ ಕಾದಿದ್ದೀವಿ" ಎಂದಳು.

"ಬಹಳ ಸಂತೋಷ.... ನನ್ನ ಹೆಸರು ಗೋವಿಂದನಾಯರ್. ರೆಟೈರ್ಡ್ ಮೇಜರ್ ಜನರಲ್......"ಎಂದು ಸುತ್ತಲೂ ಒಂದು ಬಾರಿ ತಿರುಗಿ ನೋಡಿ, "ಪ್ರದೇಶ ರಮಣೀಯವಾಗಿದೆ......ಈ ಕಡೆ ನಾನು ಬಂದಿರಲೇ ಇಲ್ಲ" ಎಂದರು. ಮೂವರೂ ಎರಡನೆಯ ಟ್ಯಾಕ್ಸಿಯಲ್ಲಿ ಕುಳಿತರು. ಟ್ಯಾಕ್ಸಿ ರಾಂಗಾವ್ ಕಡೆಗೆ ಹೊರಟಿತು.

* * * *

ರಾಂಗಾಂವ್ ಬಳಿಗೆ ಬರುವ ಹೊತ್ತಿಗೆ ಐದು ಗಂಟೆಯ ಸಮಯ ವಾಗಿತ್ತು ಸಂಜೆಯ ಸೂರ್ಯನ ಹೊಂಗಿರಣಗಳು ಪ್ರಕೃತಿಯನ್ನು ಆವರಿಸಿ ಅದಕ್ಕೆ ಹೊಸ ಮೆರಗನ್ನು ಕೊಟ್ಟಿತ್ತು. ಅತಿ ಸಮೀಪದಲ್ಲೇ ಇದ್ದ ಸಮು ದ್ರದ ಮೇಲೆ ಬೀಸಿ ಬರುತ್ತಿದ್ದ ಮಂದಾನಿಲ ಹಿತಕರವಾಗಿತ್ತು. ರಾಂಗಾಂವ್ ಒಂದು ಹಳ್ಳಿ ಎಂದು ಹೇಳುವಂತಿರಲಿಲ್ಲ. ಹತ್ತಿಪ್ಪತ್ತು ಗುಡಿಸಲುಗಳ ಒಂದು ಗುಂಪು ಅದು. ಹೆಚ್ಚಾಗಿ ಬೆಸ್ತರೇ ಅಲ್ಲಿನ ನಿವಾಸಿಗಳು. ರಸ್ತೆ ಆ ಹಳ್ಳಿಗೇ ಮುಗಿದಿತ್ತು. ಮುಂದೆ ಅದು ಒಂದು ಫರ್ಲಾಂಗ್ ದೂರದಲ್ಲಿನ ಸಮುದ್ರದ ಕಡೆಗೆ ಕಾಲುದಾರಿಯಾಗಿ ಮುಂದುವರೆದಿತ್ತು. ಸಣ್ಣ ಗುಡ್ಡದಂತೆ ಕಾಣಿಸು ತ್ತಿದ್ದ ನೀಲದ್ವೀಪ ಅವರುಗಳು ನೆನಸಿಕೊಂಡಷ್ಟು ಹತ್ತಿರವೇನೂ ಇರಲಿಲ್ಲ.

ರಸ್ತೆ ಮುಗಿದಿದ್ದ ಕಡೆ ಒಂದು ಮರದ ಕೆಳಗೆ ಮೂರು ಜನ ಕುಳಿತು

ಹರಟಿ ಹೊಡೆಯುತ್ತಿದ್ದರು. ಧರ್ಮಸಿಂಗ್ ಮತ್ತು ಸುಧಾದೇವಿಯೊಡನೆ ಮತ್ತೊಬ್ಬ ಹೊಸಬ ಕಂಡುಬಂದ. ಅವನೇ ಎದುರುಗೊಳ್ಳಲು ಮುಂದೆ ಬಂದು "ನಮಸ್ಕಾರ ... ನಿಮಗಾಗಿ ಕಾದಿದ್ದೇವೆ. ಮೋಟಾರ್ ಬೋಟು ಸಿದ್ಧ ವಾಗಿದೆ. ಎಲ್ಲರೂ ಒಟ್ಟಿಗೇ ಹೊರಟುಬಿಡೋಣ" ಎಂದ. ಹೊಸಬನ ಪರಿ ಚಯವಿಲ್ಲದಿದ್ದುದರಿಂದ ಆಶಾ ಒಂದು ಕ್ಷಣ ಅವನನ್ನು ಕುತೂಹಲದಿಂದ ನೋಡಿದಳು. ಕೂಡಲೇ ಅವನು "ನನ್ನ ಹೆಸರು ಕೈಲಾಸ್‌ನಾಥ್.... ಸ್ಥಳ ಅಸ್ಸಾಂ......ಆಹಹ" ಎಂದು ಮೆಲ್ಲನೆ ನಕ್ಕ ಅಷ್ಟರಲ್ಲಿ ಧರ್ಮಸಿಂಗ್, ಸುಧಾ ದೇವಿಯರೂ ಎದ್ದು ಬಂದರು. ಸುಧಾ ಕಾರಿನಿಂದ ಥರ್ಮಾಸ್ ಫ್ಲಾಸ್ಕ್ ತೆಗೆದು ಎಲ್ಲರಿಗೂ ಕಾಫೀ ಹಂಚಿದಳು. ಜೊತೆಗೆ ಎರೆಡೆರಡು ಬಿಸ್ಕತ್ತುಗಳನ್ನು ತೆಗೆದು ಕೊಟ್ಟಳು. ಯಾರಿಗೂ ಹಸಿವಿರಲಿಲ್ಲ. ಅಷ್ಟರಿಂದಲೇ ಎಲ್ಲರೂ ತೃಪ್ತ ರಾದರು. ಅಜಯ, ಕೈಲಾಸ್ ಇಬ್ಬರೂ ಸಿಗರೇಟು ಹಚ್ಚಿದರು. ಅಷ್ಟರಲ್ಲಿ ಆಗಲೇ ಒಂದು ಬಾರಿ ಬಂದು ಮಾತನಾಡಿಕೊಂಡು ಹೋಗಿದ್ದ ಬೋಟಿನ ಡ್ರೈವರ್ ಅವರ ಬಳಿ ಬಂದು, "ಇನ್ನು ಹೊರಡೋಣವೆ ? ಬೋಟು ಸಿದ್ಧ ವಾಗಿದೆ.... ಇನ್ನೂ ಒಬ್ಬರು ಬರಬೇಕಾಗಿದೆ. ಆದರೆ ಅವರಿಗಾಗಿ ನೀವು ಕಾಯಬೇಕಾಗಿಲ್ಲ. ಇನ್ನೊಂದು ಟ್ರಿಪ್‌ನಲ್ಲಿ ನಾನು ಅವರನ್ನು ಕರೆದು ಕೊಂಡು ಬರುತ್ತೇನೆ .. ಯಾರನ್ನೂ ಕಾಯಿಸಬೇಡ ಎಂದು ಸಾಹೇಬರ ಅಪ್ಪಣೆಯಾಗಿದೆ" ಎಂದ.

ಗೋವಿಂದನಾಯರ್ ಅವನ ಕಡೆಗೆ ತಿರುಗಿ "ಅಂದಹಾಗೆ......ನಿನ್ನ ಹೆಸರೇನು ?" ಎಂದರು.

ಡ್ರೈವರ್ ವಿನಯದಿಂದ "ಶ್ಯಾಮಲಾಲ್" ಎಂದ. ಎಲ್ಲರೂ ಸಮುದ್ರದ ಮರಳದಂಡೆಗೆ ಬಂದರು. ದಡದಲ್ಲಿ ಅಷ್ಟೇನೂ ದೊಡ್ಡದಲ್ಲದ ಬೋಟ್ ನಿಂತಿತ್ತು.

"ಇಷ್ಟು ಜನಕ್ಕೆ ಸಾಲುತ್ತದೆಯೆ !.....ಮುಳುಗಿ ಹೋದರೆ ಏನು ಗತಿ ?" ಎಂದಳು ಆಶಾ.

"ಇದೇನು ತಾಯಿ ಹೀಗೆ ಹೇಳುತ್ತೀರಿ! ನೀವಿರುವುದು ಆರು ಜನ...... ಹತ್ತು ಜನ ಧಾರಾಳವಾಗಿ ಕೂಡಬಹುದು" ಎನ್ನುತ್ತಾ ಶ್ಯಾಮಲಾಲ್

ದೋಣಿಯ ಒಳಗೆ ಕಾಲಿಟ್ಟ. ಒಬ್ಬೊಬ್ಬರಾಗಿ ಎಲ್ಲರೂ ಒಳಗೆ ಬಂದು ಕೂತರು. ಡ್ರೈವರ್ ಲಂಗರನ್ನು ಬಿಚ್ಚಿ ಎಂಜಿನ್ ಸ್ವಿಚ್ ಅದುಮಿ ಸ್ಟಿಯರಿಂಗನ್ನು ಕೈಲಿ ಹಿಡಿದು ಕೂತ. "ಭರ್" ಎಂದು ಶಬ್ದ ಮಾಡುತ್ತಾ ದೋಣಿ ಮುಂದುವರಿಯಿತು.

ಒಂದೇ ದಾರಿಯಲ್ಲಿ ಒಂದೇ ಗುರಿಯತ್ತ ಸಾಗುತ್ತಿದ್ದರೂ ಆ ಆರು ಜನರಲ್ಲಿ ಪರಸ್ಪರ ನಿಕಟಸ್ನೇಹವೇನೂ ಇರಲಿಲ್ಲ. ಒಬ್ಬರಿಗೆ ಮತ್ತೊಬ್ಬ ಅಪರಿಚಿತ. ಪ್ರತಿಯೊಬ್ಬರೂ ತಮಗೆ ತಾವೇ ಯೋಚಿಸುತ್ತಿದ್ದರು "ಇವರೆಲ್ಲಾ ಯಾರು? ಏಕೆ ಬಂದಿದ್ದಾರೆ ? ಅಥವಾ ಅವರಿಗೂ ಆಹ್ವಾನವಿರಬೇಕು. ಆದ್ದರಿಂದಲೇ ಬಂದಿದ್ದಾರೆ."

ಸ್ನೇಹವನ್ನು ಬೆಳಸಿಕೊಳ್ಳಲು ಎಲ್ಲರೂ ಮಾತಿಗಾರಂಭಿಸಿದ್ದರು. ಸುಧಾದೇವಿಗೆ ಧರ್ಮಸಿಂಗರೊಡನೆ ಮಾತಾಡುವುದು ಬಹಳ ಸ್ವಾರಸ್ಯವೆನಿಸಿತ್ತು. ಅಜಯ ಅಸ್ಸಾಂನ ಕಾಡುಗಳು, ಅಲ್ಲಿನ ಜನರು, ಟೀ ತೋಟಗಳ ಬಗ್ಗೆ ಕೈಲಾಸನಿಗೆ ಪ್ರಶ್ನೆಗಳನ್ನು ಹಾಕುತ್ತಿದ್ದ. ಗೋವಿಂದನಾಯರ್ ಯಾರೊಡನೆಯೂ ಮಾತನಾಡದೆ ಮೌನವಾಗಿ ದ್ವೀಪದ ಕಡೆಗೇ ದಿಟ್ಟಿಸಿ ನೋಡುತ್ತಿದ್ದರು.

ಆಶಾ, ಡ್ರೈವರನ್ನು ಕೇಳಿದಳು "ಈ ದಡದಿಂದ ದ್ವೀಪ ಎಷ್ಟು ದೂರವಾಗಬಹುದು ?"

"ಎರಡು ಮೂರು ಮೈಲಿ ಆಗಬಹುದು ತಾಯಿ ?"

"ಅಬ್ಬಾ ! 2–3 ಮೈಲಿ ! ನಾನು ಒಂದೆರಡು ಫರ್ಲಾಂಗುಗಳಿಗಿಂತ ಹೆಚ್ಚು ದೂರವಿಲ್ಲವೆಂದುಕೊಂಡಿದ್ದೆ .....ಹ್ಞೂ......ನೀರಿನ ಆಳವೆಷ್ಟಿರಬಹುದು?

"ಆಳ ಹೇಳುವುದು ಕಷ್ಟ......ಆದರೆ ಐನೂರರಿಂದ ಸಾವಿರ ಅಡಿಯವರೆಗೂ ಆಳವಿರಬಹುದು, ಎಂದು ಜನ ಹೇಳುತ್ತಾರೆ....ನಾನೇನೂ ಅದನ್ನು ಅಳೆದು ನೋಡಿಲ್ಲ"

ಆಶಾಗೆ ಮೈಯಲ್ಲಿ ನಡುಕ ಬಂದಂತಾಯ್ತು. ಮತ್ತೆ ಪ್ರಶ್ನೆ ಕೇಳದೆ ಸುಮ್ಮನಾದಳು.

ಶ್ಯಾಮಲಾಲನಿಗೆ ಈ ಅತಿಥಿಗಳನ್ನು ಕಂಡು ಆಶ್ಚರ್ಯವಾಗಿತ್ತು.

ಇವರೆಲ್ಲಾ ಆ ಸಾಹೇಬರ ಅತಿಥಿಗಳೇ ? ನೋಡಿದರೆ ಇವರಲ್ಲಿ ಯಾರಿಗೂ ಅವರ ಸರಿಸಮನಾದ ಅಂತಸ್ತು ಇರುವಂತಿಲ್ಲ. ಒಬ್ಬೊಬ್ಬರೂ ಒಂದೊಂದು ರೀತಿ ವಿಚಿತ್ರವಾಗಿದ್ದಾರೆ. ಅಥವ ತಾನಾದರೂ ಆ ಸಾಹೇಬನನ್ನ ನೋಡಿ ದ್ದಾನೆಯೆ ? ಅದೂ ಇಲ್ಲ. ಎಲ್ಲವೂ ರಾಮದಾಸ್‌ನ ಮಾತಿನಂತೆ ಅವನು ಕೊಡುತ್ತಿದ್ದ ದುಡ್ಡಿಗಾಗಿ ಕೆಲಸ ಮಾಡುತ್ತಿದ್ದ. ದೋಣಿ ದ್ವೀಪದ ಹತ್ತಿರಕ್ಕೆ ಬಂದಂತೆ ದ್ವೀಪದ ಚಿತ್ರ ಸ್ಪಷ್ಟವಾಗಿ ಕಂಡುಬಂತು. ಬರೀ ಬಂಡೆಗಳಿಂದ ತುಂಬಿದಪ್ರದೇಶವದು. ಆದರೆ ಅಲ್ಲಿನ ಭವನ ಕಾಣಲಿಲ್ಲ. ಶ್ಯಾಮಲಾಲನನ್ನು ವಿಚಾರಿಸಿದ್ದಲ್ಲಿ ನಿಜಾಂಶ ತಿಳಿದುಬಂತು. ಭವನ ರಾಂಗಾಂವ್‌ಗೆ ನೇರವಾಗಿ ಎದುರಿಗಿರಲಿಲ್ಲ. ಅದರ ಮುಂಭಾಗಕ್ಕೆ ಹೋಗಬೇಕಾದರೆ ದ್ವೀಪವನ್ನು ಸುತ್ತುಹಾಕಬೇಕಾಗಿತ್ತು. ಅದರಂತೆ ಬೋಟು ದ್ವೀಪವನ್ನು ಸುತ್ತಲಾರಂಭಿ ಸಿತು. ಅರ್ಧ ಮೈಲಿ ಸುತ್ತಿದ ಮೇಲೆ ದೋಣಿ ಭವನದ ಮುಂಭಾಗಕ್ಕೆ ಬಂದಿತು. ಮುಂದಿನ ಘಳಿಗೆಯಲ್ಲಿ ಅದು ದ್ವೀಪದ ದಡವನ್ನು ತಲಪಿತು. ಎಲ್ಲರೂ ಕತ್ತೆತ್ತಿ ನೋಡಿದರು. ಸುಮಾರು ನೂರು ಅಡಿ ಎತ್ತರದಲ್ಲಿ ಆ ಭವನ ವನ್ನು ಕಟ್ಟಲಾಗಿತ್ತು. ದ್ವೀಪ ಅಷ್ಟೇನೂ ದೊಡ್ಡದಲ್ಲ. ಅದರ ಮೇಲೆ ಗಿಡ ಮರಗಳೂ ಕೂಡ ಹೆಚ್ಚಾಗಿರಲಿಲ್ಲ.

ಶ್ಯಾಮಲಾಲ್ ದೋಣಿಯಿಂದ ಹೊರಗೆ ಹಾರಿ ಲಂಗರನ್ನುಬಂಧಿಸಿದ. ಎಲ್ಲರೂ ನಿದಾನವಾಗಿ ದೋಣಿಯಿಂದ ಇಳಿದರು. ಶ್ಯಾಮಲಾಲ್ ಅವರಿಗೆ ಗುಡ್ಡದ ಮೇಲಿನ ದಾರಿ ತೋರಿಸುತ್ತಾ ಹೊರಟ. ಬಂಡೆಯಲ್ಲೇ ವಕ್ರ ವಕ್ರ ವಾಗಿ ಮೆಟ್ಟಿಲನ್ನು ಕೊರೆಯಲಾಗಿತ್ತು. ಅಕ್ಕಪಕ್ಕದಲ್ಲಿ ಕುರಚಲು ಗಿಡಗಳು ಬೆಳೆದಿದ್ದವು. ಎಲ್ಲರೂ ಮೇಲೇರಿ ಭವನವನ್ನು ಸಮೀಪಿಸಿದ್ದರು. ಉಳಿದ ನಾಲ್ಕಾರು ಮೆಟ್ಟಿಲುಗಳನ್ನು ಹತ್ತಿ ಗುಡ್ಡದ ಸಮನಾದ ಪ್ರದೇಶದ ಮೇಲೆ ಬಂದು ನಿಂತರು. ಭವನವನ್ನು ಕಟ್ಟುವ ಉದ್ದೇಶ್ಯದಿಂದಲೇ ಅದನ್ನು ಸಮ ನಾಗಿ ಕಡೆದಂತೆ ತೋರುತ್ತಿತ್ತು. ಕಲ್ಲಿನಲ್ಲಿ ಕಟ್ಟಲಾಗಿದ್ದ ವಿಶಾಲವಾದ ಒಂದು ಅಂಗಳ. ಅಂಗಳದ ಮಧ್ಯೆ ಒಂದು ಸಣ್ಣ ಕೊಳ. ಸುತ್ತಲೂ ಒಂದು ಸಣ್ಣ ಕೈದೋಟ. ಅಲ್ಲಲ್ಲಿ ಬಳ್ಳಿಯ ಚಪ್ಪರಗಳು. ಕೂಡಲು ಸಿಮೆಂಟಿನಕಟ್ಟೆ ಗಳು. ಅಂಗಳದ ಹಿಂದೆ ಸುಂದರವಾದ, ಆಧುನಿಕ ರೀತಿಯ ಭವನ ಕಂಗೊ

ಳಿಸುತ್ತಿತ್ತು. ಅವರು ಅಲ್ಲಿಗೆ ಬರುತ್ತಿದ್ದಂತೆಯೇ ಅವರನ್ನು ಎದುರುಗೊಳ್ಳಲು ಬಂದ ವ್ಯಕ್ತಿ, "ನಮಸ್ಕಾರ, ದಯಮಾಡಿಸಬೇಕು" ಎನ್ನುತ್ತಾ ಭವನದ ಒಳಗೆ ಕರೆದುಕೊಂಡು ಹೊರಟ. ಒಳಭಾಗವೆಲ್ಲಾ ಅತ್ಯಾಧುನಿಕ ರೀತಿಯಲ್ಲಿ ಸಜ್ಜುಗೊಳಿಸಲಾಗಿತ್ತು. ಎಲಕ್ಟ್ರಿಕ್ ದೀಪಗಳು, ಫ್ಯಾನುಗಳು, ಸೋಪಾಗಳು ನಿಲವುಗನ್ನಡಿಗಳು, ರೇಡಿಯೋ. ಯಾವುದೂ ಕಡಿಮೆಯಾಗಿರಲಿಲ್ಲ. ಒಂದು ಮೇಜಿನ ಮೇಲೆ ನಾನಾ ವಿಧವಾದ ಪಾನೀಯಗಳು ಸಿದ್ಧವಾಗಿದ್ದವು. ಧರ್ಮಸಿಂಗ್ ತಮ್ಮನ್ನು ಎದರುಗೊಂಡವನನ್ನ ಕರೆದು, "ನೀವು......" ಎನ್ನುತ್ತಿದ್ದಂತೆಯೇ, ಅವನು, "ನನ್ನ ಹೆಸರು ಶಿವರಾಮ, ಇಲ್ಲಿಯ ಪರಿಚಾರಕ ನಿಮ್ಮೆಲ್ಲರ ಸತ್ಕಾರಕ್ಕಾಗಿ ನಾನು ನೇಮಿಸಲ್ಪಟ್ಟಿದ್ದೇನೆ." ಎಂದ. ಅಷ್ಟರಲ್ಲಿ ಒಳಗಿಂದ ಮಹಿಳೆಯೊಬ್ಬಳು ಹೊರ ಬಂದಳು. ಶಿವರಾಮ ಅವಳ ಕಡೆಗೆ ತಿರುಗಿ, "ಇವಳು ನನ್ನ ಹೆಂಡತಿ, ಸರೋಜ. ನಾವಿಬ್ಬರೂ ನಿಮ್ಮ ಸೇವೆಗೆ ಸರ್ವದಾಸಿದ್ಧ." ಎಂದ.

ಅಜಯಕುಮಾರ್ "ಸರಿ, ಮಾಧವ ಸಾಹೇಬರೆಲ್ಲಿ ?"

"ಅವರಿನ್ನೂ ಇಲ್ಲಿಗೆ ಬಂದಿಲ್ಲ. ಯಾವುದೋ ಕಾರಣದಿಂದ ಅನಿವಾರ್ಯವಾಗಿ ಆ ದಂಪತಿಗಳು ಬೊಂಬಾಯಿಯಲ್ಲೇ ನಿಲ್ಲಬೇಕಾಗಿ ಬಂತೆಂದು ತಿಳಿದುಬಂದಿದೆ. ನಾಳೆ ಬೆಳಿಗ್ಗೆ ಬಂದು ಬಿಡಬಹುದು. ಆದರೆ ಅದಕ್ಕಾಗಿ ನೀವು ಸಂಕೋಚಪಡಬೇಕಾಗಿಲ್ಲ."

ಅತಿಥಿಗಳು ಪರಸ್ಪರ ದೃಷ್ಟಿಸಿ ನೋಡಿದರು. ಮಾಧವಸಾಹೇಬರ ವರ್ತನೆಯಿಂದ ಅವರಿಗೆ ಆಶ್ಚರ್ಯವಾಗಿತ್ತು.

"ಮಹಡಿಯ ಮೇಲೆ ಎಲ್ಲರಿಗೂ ಬೇರೆ ಬೇರೆ ರೂಮುಗಳನ್ನು ಏರ್ಪಡಿಸಲಾಗಿದೆ......ವಿಶ್ರಮಿಸಿಕೊಳ್ಳಬಹುದು. ಎಂಟು ಘಂಟೆಗೆ ಸರಿಯಾಗಿ ಊಟ." ಎಂದ ಶಿವರಾಮ. ಎಲ್ಲರೂ ನಿಧಾನವಾಗಿ ಮಹಡಿಯ ಮೆಟ್ಟಲುಗಳನ್ನು ಹತ್ತಿ ಮೇಲಕ್ಕೆ ಬಂದರು.

*  *  *  *

ಆಶಾದೇವಿ ಸರೋಜಳ ಹಿಂದೆ ಮಹಡಿ ಹತ್ತಿ ಬಂದಳು. ಮಹಡಿ ಮೇಲಿನ ವರಾಂಡದ ಉದ್ದಕ್ಕೂ ಒಂದು ಕಡೆಯಲ್ಲಿ ನಾಲ್ಕು ಕೊಠಡಿಗಳು

ನಂತರ ವರಾಂಡ ಎಡಕ್ಕೆ ತಿರುಗಿತ್ತು. ಅಲ್ಲೂ ಉದ್ದಕ್ಕು ಐದಾರು ಕೊಠಡಿಗಳು. ಸರೋಜ ನೇರವಾಗಿ ಒಂದು ಕೊಠಡಿಯ ಬಳಿಗೆ ಬಂದು ಬಾಗಿಲನ್ನು ತೆಗೆದು ಒಳಹೊಕ್ಕಳು. ಆಶಾ ಅವಳನ್ನು ಹಿಂಬಾಲಿಸಿದಳು. ಬೀಗದ ಕೈಯನ್ನು ಆಶಾಳಿಗೆ ಕೊಡುತ್ತಾ, "ಇದೇ ನಿಮ್ಮ ರೂಂ. ನಿಮ್ಮ ಸಾಮಾನುಗಳನ್ನು ಇಲ್ಲೇ ಇಡಿಸುತ್ತೇನೆ" ಎಂದಳು. ಸರೋಜಳ ಮುಖಭಾವ ಬಹಳ ವಿಚಿತ್ರವಾಗಿ ಕಂಡುಬಂತು. ರಕ್ತ ರಹಿತವಾದ ಆ ನಿಸ್ತೇಜ ಮುಖದಲ್ಲಿ ಭಯಗ್ರಸ್ತ ಸೂಚನೆಗಳು ಸ್ಪಷ್ಟವಾಗಿದ್ದವು. ಹೆದರಿಕೆಗೆ ಏನು ಕಾರಣವಿರಬಹುದೆಂದು ಆಶಾ ಯೋಚಿಸಿ ನೋಡಿದಳು. ಆದರೆ ಉತ್ತರ ದೊರೆಯಲಿಲ್ಲ.

"ನಾನು ಲೀಲಾವತಿಯವರ ಹೊಸಸೆಕ್ರೆಟರಿ. ಅದು ನಿಮಗೆ ಗೊತ್ತಿರಲಾರದು." ಅವಳ ಮಾತಿನಲ್ಲಿ ಹೆಮ್ಮೆಯ ಧ್ವನಿಯಿತ್ತು.

"ಇಲ್ಲ, ನನಗೆ ಗೊತ್ತಿರಲಿಲ್ಲ. ಇಲ್ಲಿಗೆ ಬರುವವರ ಹೆಸರುಗಳು ಮಾತ್ರ ನನಗೆ ಗೊತ್ತಿತ್ತು."

"ಏಕೆ, ಅವರು ನಿಮಗೆ ತಿಳಿಸಲಿಲ್ಲವೇ ?"

"ನಾನೇ ಅವರನ್ನು ನೋಡಿಲ್ಲ. ನಾವು ಇಲ್ಲಿಗೆ ಬಂದು ಎರಡು ದಿನಗಳಾದುವು ಅಷ್ಟೆ."

"ನೀವಿಬ್ಬರಲ್ಲದೆ ಕೆಲಸಗಾರರು ಎಷ್ಟು ಮಂದಿ ಇದ್ದಾರೆ ?"

"ಬೇರೆ ಯಾರೂ ಇಲ್ಲ. ನಾವಿಬ್ಬರೆ."

ಆಶಾಗೆ ಆಶ್ಚರ್ಯವಾಯಿತು. 'ಇದೇಕೆ ಹೀಗೆ ? ಇಷ್ಟು ಜನ ಅತಿಥಿಗಳು ಬಂದಿರುವ ಮನೆಗೆ ಅಡಿಗೆಯವರ ಹೊರತು ಕೆಲಸಗಾರರೆ ಇಲ್ಲವೆಂದರೆ !' ಎಂದುಕೊಂಡಳು.

"ನಾನು ಕೆಳಗೆ ಹೋಗುತ್ತೇನೆ. ಬೇಕಾದಾಗ ಕಾಲಿಂಗ್‌ಬೆಲ್ ಒತ್ತಬಹುದು" ಎಂದು ಹೇಳಿ ಸರೋಜ ರೂಂನಿಂದ ಹೊರ ಹೊರಟಳು.

ಸರೋಜ ಹೊರಟು ಹೋದಮೇಲೆ ಆಶಾ ತನ್ನ ಕೊಠಡಿಯನ್ನು ಪರೀಕ್ಷಿಸಿದಳು. ಅಲ್ಲಿ ಎಲ್ಲಾ ಸಿದ್ಧತೆಗಳೂ ಇದ್ದವು. ದೊಡ್ಡಮೇಜು, ಅದರ ಹಿಂದೆ ಒಂದು ನಿಲುವುಗನ್ನಡಿ, ಅದರ ಪಕ್ಕದಲ್ಲಿ ಎತ್ತರವಾದ ಸ್ಟ್ಯಾಂಡಿನ ಮೇಲೆ ಹಳೆಯ ಕಾಲದ ಒಂದು ಗಡಿಯಾರ. ಮೇಜಿನ

ಎದರು ಭಾಗದಲ್ಲಿ ಹಾಸಿಗೆ ಹಾಸಲಾಗಿದ್ದ ಒಂದು ಮಂಚ. ಪಕ್ಕದಲ್ಲಿ ಒಂದು ಬೀರು. ಅಲ್ಲಲ್ಲಿ ನಾಲ್ಕಾರು ದೀಪಗಳು. ಮೇಲೆ ದೊಡ್ಡದೊಂದು ಫ್ಯಾನ್. ರೂಮಿನ ಬಾಗಿಲ ಎದುರಿಗೆ ಸರಿಯಾಗಿ ವಿಶಾಲವಾದ ಕಿಟಕಿ ಒಂದಿತ್ತು. ಅದರ ಮೂಲಕ ಕಂಡು ಬರುತ್ತಿದ್ದ ಹೊರಗಿನ ದೃಶ್ಯ ರಮಣೀಯವಾಗಿತ್ತು. ಆಶಾ ಕಿಟಕಿಯ ಬಳಿಗೆ ಬಂದು ನಿಂತಳು. ಸಮುದ್ರದ ಸುಂದರವಾದ ನೋಟ ಅವಳ ಮನಸ್ಸನ್ನು ಸೆರೆಹಿಡಿಯಿತು. ಎಲ್ಲೆಲ್ಲೂ ಸಮುದ್ರದ ನೀಲಿಯ ನೀರೇ ನೀರು.

* * * *

ಆನಂದರಾಜ್ ನೀಲದ್ವೀಪದ ಅಂಗಳದಲ್ಲಿ ಬಂದು ನಿಂತಾಗ ಆಗಲೇ ಸೂರ್ಯ ಮುಳುಗಿ ಕತ್ತಲು ಕವಿಯುತ್ತಾ ಬಂದಿತ್ತು. ಶ್ಯಾಮಲಾಲ್ ಭವನದವರೆಗೂ ಜೊತೆಗೆ ಬಂದು ನಮಸ್ಕಾರ ಹೇಳಿ ಹೊರಟು ಹೋಗಿದ್ದ. ಆವನನ್ನು ಎದುರುಗೊಳ್ಳಲು ಯಾರೂ ಬರಲಿಲ್ಲ. ಒಂದು ನಿಮಿಷ ಅಂಗಳದಲ್ಲೇ ಸುತ್ತಾಡತೊಡಗಿದ. ಒಂದು ಮೂಲೆಯಲ್ಲಿ ಬಳ್ಳಿಯ ಚಪ್ಪರದ ಕೆಳಗೆ ಯಾರೋ ಕುಳಿತಿದ್ದರು. ನೇರವಾಗಿ ಅವರ ಬಳಿಗೆ ಬಂದ. ಆ ವ್ಯಕ್ತಿಯನ್ನು ಹಿಂದೆ ತಾನೆಲ್ಲೋ ನೋಡಿದ್ದಂತೆ ತೋರಿತು. ತಕ್ಷಣ ಅವನಿಗೆ ಹೊಳೆಯಿತು. 'ನ್ಯಾಯಾಧೀಶ ಧರ್ಮಸಿಂಗ್ ಇರಬೇಕು' ಎಂದುಕೊಂಡ. ಕೋರ್ಟಿನಲ್ಲಿ ಅವರೆದುರಿಗೆ ಕೆಲವು ಸಾರಿ ಸಾಕ್ಷ್ಯವನ್ನು ಕೊಟ್ಟಿದ್ದ. ಕೆಲವರಿಗೆ ಅವರ ನಿಷ್ಪಕ್ಷಪಾತವಾದ ತೀರ್ಮಾನವನ್ನು ಕಂಡರೆ ಆಗುತ್ತಿರಲಿಲ್ಲ. ನ್ಯಾಯಪಕ್ಷಪಾತಿ ಎಂದು ಅವರು ತಮ್ಮ ಕಾಲದಲ್ಲಿ ಪ್ರಸಿದ್ಧರಾಗಿದ್ದರು. 'ಓ, ಇವರೂ ಇಲ್ಲಿಗೆ ಆಹ್ವಾನಿತರಾಗಿದ್ದಾರೆ. ಪರವಾಗಿಲ್ಲ. ಮಾಧವ ಸಾಹೇಬರ ಮಿತ್ರರಿರಬಹುದು,' ಎಂದುಕೊಂಡು ಆನಂದ್ ಅವರಿಗೆ ತಲೆಬಾಗಿ "ನಮಸ್ಕಾರ" ಎಂದ. ಧರ್ಮಸಿಂಗ್ ಕತ್ತೆತ್ತಿ ನೋಡಿ ಮೆಲ್ಲನೆ ನಕ್ಕು "ನಮಸ್ಕಾರ, ಕೂತುಕೊಳ್ಳಿ" ಎಂದರು.

"ಮೊದಲು ಮಾಧವ ಸಾಹೇಬರನ್ನು ಕಂಡು ನನ್ನ ಧನ್ಯವಾದಗಳನ್ನು ಅರ್ಪಿಸ ಬೇಕಾಗಿದೆ."

"ಆದರೆ ಈಗ ಅದು ಸಾಧ್ಯವಿಲ್ಲ."

ಆನಂದ ಕುತೂಹಲ ದೃಷ್ಟಿಯಿಂದ ನೋಡಿ, "ಏಕೆ ?" ಎಂದ.

"ಮಾಧವ ಸಾಹೇಬರೂ ಇಲ್ಲ. ಅವರ ಪತ್ನಿ ಲೀಲಾದೇವಿಯವರು ಮೊದಲೇ ಇಲ್ಲ. ಅತಿಥಿಗಳು ಬಂದಾಗ ಮನೆಯ ಯಜಮಾನರೇ ಇಲ್ಲದಿರುವುದು ವಿಚಿತ್ರವಾಗಿದೆ. ನನಗಂತೂ ಅರ್ಥವಾಗಲಿಲ್ಲ." ಧರ್ಮಸಿಂಗರ ಮಾತುಗಳಲ್ಲಿ ಕೋಪದ ಕಿಡಿಗಳು ಉದುರುತ್ತಿದ್ದವು. ಆನಂದ ಅವರನ್ನೇ ದೃಷ್ಟಿಸಿ ನೋಡಿದ. ಮತ್ತೆ ಅವರೇ ಕೇಳಿದರು. "ನೀವು ಮಾಧವ ಸಾಹೇಬರನ್ನು ನೋಡಿದ್ದೀರಾ ?"

"ಇಲ್ಲ.........ಇಲ್ಲ, ಈಗಲೇ ನಾನು ಇಲ್ಲಿಗೆ ಬರುತ್ತಿರುವುದು"

"ನನಗಂತೂ ದಾರಿತಪ್ಪಿ ಬೇರೇಕಡೆ ಬಂದು ಬಿಟ್ಟಿರುವಂತೆ ತೋರುತ್ತಿದೆ. ಆ ಕಾಗದವು ಸ್ಪಷ್ಟವಾಗಿರಲಿಲ್ಲ." ಎಂದು ಏನೇನೋ ಗೊಣಗುಟ್ಟಿದರು ಧರ್ಮಸಿಂಗ್.

ಅವರನ್ನು ಅಲ್ಲಿಯೇ ಬಿಟ್ಟು ಆನಂದ ಒಳನುಗ್ಗಿದ. ಶಿವರಾಮು ಬಂದು ಅವನನ್ನು ಎದುರುಗೊಂಡು ಮಹಡಿಯ ಮೇಲಿನ ರೂಮನ್ನು ತೋರಿಸಿ ಹೊರಟು ಹೋದ. ಒಳಗಿನ ವೈಭವಯುತ ಏರ್ಪಾಡುಗಳನ್ನು ನೋಡಿ ಆನಂದ ಮೂಕನಾಗಿದ್ದ.

ಮಾಧವ ಸಾಹೇಬರ ಐಶ್ವರ್ಯದ ಮಿತಿಯನ್ನು ನಿರ್ಧರಿಸಲು ಅವನಿಗೆ ಸಾಧ್ಯವಾಗಲಿಲ್ಲ.

* * * *

ಅಜಯ ಕುಮಾರ್ ಸ್ನಾನದ ತೊಟ್ಟಿಯಲ್ಲಿ ಬಿಸಿನೀರಿನಲ್ಲಿ ಮುಳುಗಿ ಆಯಾಸ ಪರಿಹರಿಸಿಕೊಳ್ಳುತ್ತಿದ್ದ. ತನ್ನ ಕರ್ತವ್ಯದ ಕಡೆ ಅವನ ಯೋಚನೆ ಹರಿಯಿತು. 'ಯಾವ ಸಾಹಸೋದ್ಯಮದ ನೆರವಿಗಾಗಿ ಮಾಧವ ಸಾಹೇಬರು ತನ್ನನ್ನು ಕರೆಸಿಕೊಂಡಿರಬಹುದು ? ಆದರೆ ಅವರೇ ಇಲ್ಲಿಲ್ಲ. ... ......ಏಕೆ ಬರಲಿಲ್ಲ ? ಅನಿವಾರ್ಯವಾಗಿ ಬೊಂಬಾಯಿಯಲ್ಲೇ ನಿಲ್ಲಬೇಕಾಯಿತೆಂದು ಶಿವರಾಮು ತಿಳಿಸಿದ್ದ. ಊಟದ ಹೊತ್ತಿಗಾದರೂ ಬರಬಹುದೋ ? ಅಥವಾ ನಾಳೆಯಾದರೂ ಬರಬಹುದು....ಬರಲಿ....' ಎಂದುಕೊಂಡ.

* * * *

ಕಿರ್ಷಚಂದ್ ಕುತ್ತಿಗೆಯ ಟೈ ಸರಿಮಾಡಿಕೊಳ್ಳುತ್ತಾ ಯೋಚಿಸಿದ. 'ನಾನು ಯಾರೆಂಬುದು ಇಲ್ಲಿ ಯಾರಿಗೂ ಗೊತ್ತಾಗಿಲ್ಲ. ನನ್ನ ಕಣ್ಣಿಗೆ ಮಣ್ಣು ಎರಚಲು ಯಾರಿಗೂಸಾಧ್ಯವಿಲ್ಲ....ಅಹಹ" ಎಂದು ಮೆಲ್ಲನೆ ನಕ್ಕ. ಆಗಲೇ ಅವನಿಗೆ ಹಸಿವಾಗುತಿತ್ತು. 'ಶಿವರಾಮ ಏನೇನು ಅಡಿಗೆ ಮಾಡಿ ರಬಹುದು. ? ಉಡುಪಿ ಕಡೆಯವರು ಇದ್ದಂತಿದೆ. ಅಡಿಗೆ ಬಹು ರುಚಿಯಾ ಗಿರಬಹುದು.'

* * * *

ಗೋವಿಂದನಾಯರ್‌ಗೆ ದ್ವೀಪದ ವಾತಾವರಣ ಹಿಡಿಸಿರಲಿಲ್ಲ. ಬೊಂಬಾಯಿಯಲ್ಲೇ ಇದ್ದಿದ್ದರೆ ಇಷ್ಟು ಹೊತ್ತಿಗೆ ಮೇರೀಡ್ರೈವ್‌ನಲ್ಲೋ ... ಟಾಜ್‌ನಲ್ಲೊ ಅಥವ ಮೆಟ್ರೊನಲ್ಲೋ ಆನಂದವಾಗಿರಬಹುದಾಗಿತ್ತು. ತಮ್ಮ ಹಳೆಯ ಸ್ನೇಹಿತರಾರೂ ಇನ್ನೂ ಬಂದಿರಲಿಲ್ಲ. ನಾಳೆಯಾದರೂ ಬರಬಹುದು. ಅಲ್ಲಿಯವರೆಗೂ ಬೇಜಾರು. ಉಳಿದವರಲ್ಲಿ ಯಾರ ಸ್ನೇಹವೂ ಅವರಿಗೆ ಹಿತವೆನಿಸಲಿಲ್ಲ. ಎಷ್ಟಾದರೂ ಅವರೆಲ್ಲಾ ಹೊಸಬರು.

'ಮೋಟಾರ್ ಬೋಟ್ ಇನ್ನೂಹೊರಟರದಿದ್ದರೆ ವಾಪಸ್ಸು ಹೊರಟು ಹೋಗಬಹುದು. ನಾಳೆ ಸಂಜೆ ಪುನಃ ಬಂದರಾಯತು. ಶಿವರಾಮನನ್ನು ವಿಚಾರಿಸೋಣ' ಎಂದುಕೊಂಡರು.

* ÷ * *

ರಾತ್ರಿ ಎಂಟು ಘಂಟೆ ಹೊತ್ತಿರಬಹುದು. ಡೈನಿಂಗ್ ಹಾಲಿನಲ್ಲಿ ಎಲೆಕ್ಟ್ರಿಕ್‌ಬೆಲ್ ಶಬ್ದವಾಡಿತು. ಅದು ಶಿವರಾಮನ ಊಟದ ಕರೆ ಎಂದು ಎಲ್ಲರಿಗೂ ಹೊಳೆಯಿತು. ಎಲ್ಲರೂ ತಮ್ಮ ತಮ್ಮ ಕೊಠಡಿಯಿಂದ ಹೊರಬಿದ್ದರು. ದುಂಡುಮೇಜಿನ ಮೇಲೆ ಊಟದ ಏರ್ಪಾಡುಗಳು ಅಚ್ಚುಕಟ್ಟಾಗಿದ್ದುವು. ಎಲ್ಲರೂ ಮೇಜಿನ ಸುತ್ತಲಿದ್ದ ಕುರ್ಚಿಗಳನ್ನು ಅಲಂಕರಿಸಿದರು.

* * * *

೩

ಊಟ ಮುಗಿಯುತ್ತ ಬಂದಿತ್ತು. ಉಡುಪಿಯವನ ಅಡಿಗೆಯೆಂದರೆ ಕೇಳಬೇಕೆ. ನಳಪಾಕ. ಹತ್ತಾರುಬಗೆಯ ರುಚಿಯಾದ ಅಡಿಗೆಗಳನ್ನು ಮಾಡಿದ್ದ. ವಾಂಗೀಭಾತ್, ಬೋಂಡ, ಕೀರು, ಹಪ್ಪಳ, ಆಲೂಗೆಡ್ಡೆ ಈರುಳ್ಳಿಹುಳಿ, ಮೊಸರನ್ನ, ಉಪ್ಪೇರಿ, ಇತ್ಯಾದಿ. ಅತಿಥಿಗಳೆಲ್ಲ ತಿಂದು ತೇಗಿದರು. ಬಡಿಸುವುದರಲ್ಲೂ ಶಿವರಾಮು ಬಹಳ ಚುರುಕಾಗಿದ್ದ. ಊಟ ಮುಗಿಸಿದ್ದರೂ ಅವರ ಹರಟೆ ಮುಗಿದಿರಲಿಲ್ಲ. ಧರ್ಮಸಿಂಗ್ ಹೇಳುತ್ತಿದ್ದ ಯಾವುದೋ ಘಟನೆಯನ್ನು ಆನಂದ ಕುತೂಹಲದಿಂದ ಕೇಳುತ್ತಿದ್ದ. ಅಸ್ಸಾಂಕಾಡುಗಳ ಬಗ್ಗೆ ಆಶಾ ಕಿಷನ್‌ಚಂದನನ್ನು ಕುರಿತು ಪ್ರಶ್ನೆ ಕೇಳು ತ್ತಿದ್ದಳು. ಸುಧಾದೇವಿ, ಗೋವಿಂದನಾಯರು ವಿವರಿಸುತ್ತಿದ್ದ ಮೊದ ಲನೆ ಮಹಾಯುದ್ಧದ ಘಟನೆಗಳನ್ನು ಆಶ್ಚರ್ಯದಿಂದ ಆಲಿಸುತ್ತಿದ್ದಳು. ಅಜಯಕುಮಾರ್ ಎಲ್ಲರನ್ನೂ ಕುತೂಹಲ ದೃಷ್ಟಿಯಿಂದ ನೋಡುತ್ತಾ ಸಿಗರೇಟಿನ ಹೊಗೆಯನ್ನು ಸವಿಯುತ್ತಿದ್ದ. ಅವರ ಮಾತುಗಳು ಅವನಿಗೆ ಸ್ವಾರಸ್ಯವಾಗಿದ್ದವು. ಮೇಜಿನ ಮಧ್ಯೆ ಇದ್ದ ಯಾವುದೋ ವಸ್ತು ಕಿಷನ್ ಚಂದನ ಗಮನವನ್ನು ಸೆಳೆಯಿತು. ಸರಕ್ಕನೆ ಪಕ್ಕದಲ್ಲಿದ್ದ ಅಜಯನ ಕಡೆಗೆ ತಿರುಗಿ ಮೇಜಿನ ಮಧ್ಯಭಾಗವನ್ನು ತೋರಿಸುತ್ತಾ

"ಅಜಯ್ ...ಇಲ್ಲಿ ನೋಡಿ....ಒಳ್ಳೆ ತಮಾಷೆಯಾಗಿದೆಯಲ್ಲವೆ ?" ಎಂದ.

ಅಜಯ ಕುತೂಹಲದಿಂದ ಮೇಜಿನ ಮೇಲೆ ಬಾಗಿ ನೋಡಿದ. ದುಂಡು ಮೇಜಿನ ಕೇಂದ್ರದಲ್ಲಿ, ಒಂದು ಗಾಜಿನ ಪೀಠದ ಮೇಲೆ ಕೆಲವು ಗಾಜಿನ ಗೊಂಬೆಗಳನ್ನು ಜೋಡಿಸಲಾಗಿತ್ತು. ಅಜಯ ಮತ್ತೆ ಕುರ್ಚಿಯ ಮೇಲೆ ಕುಳಿತು ಮೆಲ್ಲನೆ ನಕ್ಕು "ಕೋತಿಗಳ ಗೊಂಬೆ...ಎಲ್ಲಾ ಒಂದೇ ಪಡಿಯಚ್ಚು"ಎಂದ. ಎದುರಿಗಿದ್ದ ಆಶಾದೇವಿಯ ಗಮನ ಈ ಕಡೆ ತಿರುಗಿತು. ಅವಳೂ ಬಗ್ಗಿ ನೋಡಿ "ಅರೆ ! ಹೌದು....ಇದುವರೆವಿಗೂ ನಾನು ಗಮನಿ ಸಲೇ ಇಲ್ಲ....ಎಷ್ಟಿವೆ ?" ಎಂದಳು.

"ಇರಬಹುದು ಒಂದು ಡಜನ್"

"ಸ್ವಲ್ಪ ತಾಳಿ ..ಎಣಿಸಿ ನೋಡುತ್ತೀನಿ......ಇಲ್ಲ ಮೂರು ಕಡಮೆ.... ಒಂಬತ್ತೇ"

ಅಜಯ ತಾನೂ ಒಂದುಬಾರಿ ಎಣಿಸಿನೋಡಿ "ಹೌದು-ಒಂಬತ್ತು...... ಎಂಟು ಕೋತಿಗಳು....ಮಧ್ಯೆ ನೋಡಿ ಅವುಗಳನ್ನು ಆಡಿಸುವ ದೊಂಬರ ವನು....ಕೈಯಲ್ಲಿ ಕೋಲು ಹಿಡಿದು ಅವುಗಳನ್ನುಹೆದರಿಸುತ್ತಿದ್ದಾನೆ" ಎಂದ.

ಅಷ್ಟು ಹೊತ್ತಿಗೆ ಎಲ್ಲರ ಗಮನವೂ ಆಕಡೆಗೆ ತಿರುಗಿತ್ತು. ಸುಧಾ "ಬಹಳ ತಮಾಷೆಯಾಗಿದೆ......"ಎಂದಳು. "ತಮಾಷೆಯೇನು....ಎಲ್ಲ ಹುಡು ಗಾಟ". ಗೋವಿಂದನಾಯರ ಮಾತು ಬಿರುಸಾಗಿತ್ತು.

ಎಲ್ಲರೂ ಮೇಜಿನ ಮೇಲೆ ಸಿದ್ಧವಾಗಿದ್ದ ಬೀಡವನ್ನು ಸವಿದರು. ಹರಟೆ ಮುಂದುವರೆದಿತ್ತು.

ಸುಧಾ ಮತ್ತು ಆಶಾ ಇಬ್ಬರೂ ಎದ್ದು ಡೈನಿಂಗ್ ಹಾಲಿನಿಂದ ಹೊರಟು ವಿಶಾಲವಾದ ಡ್ರಾಯಿಂಗ್ ರೂಂಗೆ ಬಂದರು. ಸಮುದ್ರದ ಮೇಲೆ ಬೀಸಿಬರುತ್ತಿದ್ದ ಗಾಳಿ, ಅಂಗಳದಲ್ಲಿನ ಹೂಗಳ ಕಂಪಿನಿಂದ ಕೂಡಿ ಹಿತಕರ ವಾಗಿತ್ತು. ಅಲೆಗಳ ಸಪ್ಪಳ ಅಸ್ಪಷ್ಟವಾಗಿ ಕೇಳಿಬರುತ್ತಿತ್ತು.

ಸುಧಾ "ಛಳಿಗಾಲದಲ್ಲಿ ಇಲ್ಲಿ ಛಳಿ ತಡೆಯುವುದು ಅಸಾಧ್ಯವಿರ ಬೇಕು" ಎಂದಳು.

"ಅದೇನೊ ನಿಜ....ಆದರೆ ಲೀಲಾದೇವಿಗೇನು ಕಡಮೆ....ಛಳಿಗಾಲ ದಲ್ಲಿ ಇನ್ನೆಲ್ಲಾದರೂ ಕ್ಯಾಂಪ್ ಮಾಡುತ್ತಾರೆ"

"ಹೌದೌದು....ಲೈಲಾ ಆಗರ್ಭ ಶ್ರೀಮಂತಳು....ಅಂತಹ ಸಮಸ್ಯೆ ನಮ್ಮಂತಹವರಿಗೆ"

'ವಯಸ್ಸಾದವರೆಲ್ಲ ಹೀಗೆ, ಹೆಸರನ್ನೇ ಮರೆತುಬಿಡುತ್ತಾರೆ' ಎಂದು ಕೊಂಡು ಆಶಾ ಸುಮ್ಮನಾದಳು.

ಕ್ಷಣಕಾಲ ತಡೆದು ಸುಧಾ "ಏನು, ಲೀಲಾವತಿ ಎಂದಿರಾ?" ಎಂದಳು.

"ಹ್ಞೂ......ಲೀಲಾವತಿ."

"ಅರೆ ! ನಾನು ಅವರ ಹೆಸರೇ ಕೇಳಿಲ್ಲ....ಶೈಲಾಮಧು ಅಲ್ಲವೆ ?"

ಅಷ್ಟು ಹೊತ್ತಿಗೆ ಉಳಿದ ಗಂಡಸರೂ ಡ್ರಾಯಿಂಗ್ ರೂಮಿನೊಳಗೆ ಬಂದರು. ಅವರಹಿಂದೆಯೇ ಶಿವರಾಮ ಹಾಲಿನ ಟ್ರೇಯೊಡನೆ ಸಿದ್ಧನಾಗಿ ಬಂದ. ಎಲ್ಲರೂ ಅಲ್ಲಿನ ಸೋಫಾಗಳ ಮೇಲೆ ಒರಗಿದರು. ಅಜಯ ಬೀಡ ವನ್ನು ಅಗೆಯುತ್ತಲೇ ಸಿಗರೇಟನ್ನು ಸೇದತೊಡಗಿದ್ದ. ಧರ್ಮಸಿಂಗ್ ಆಶಾ ದೇವಿಯೊಡನೆ ಮಾತಿಗಾರಂಭಿಸಿದ್ದರು. ಆನಂದ ಅಲ್ಲೇ ಬಿದ್ದಿದ್ದ "ಫಿಲಂ ಇಂಡಿಯಾ" ಪತ್ರಿಕೆಯನ್ನು ತಿರುವುಹಾಕುತ್ತಿದ್ದ. ಕಿಷನ್‌ಚಂದ್, ಅಜಯ್ ಕಿಟಕಿಯ ಬಳಿ ಬಂದು ನಿಂತು ಸಮುದ್ರದ ತಂಗಾಳಿಗೆ ಮೈಯೊಡ್ಡಿದ್ದರು. ಶಿವರಾಮ ಎಲ್ಲರಿಗೂ ಹಾಲು ಕೊಟ್ಟು ಮುಗಿಸಿದ. ಗಂಟೆ 9-30 ಆಗಿತ್ತು. ಕ್ಷಣಕಾಲ ಎಲ್ಲವೂ ನಿಶ್ಶಬ್ದವಾಗಿತ್ತು.

ಆ ಶಾಂತ ವಾತಾವರಣವನ್ನು ಸೀಳಿಕೊಂಡು ಒಂದು ಧ್ವನಿ ಹೊರ ಟಿತು, ಯಾವ ಮುನ್ಸೂಚನೆಯೂ ಯಿಲ್ಲದೆ ಆ ಅಮಾನುಷ ಧ್ವನಿ ನಿಷ್ಠುರ ವಾಗಿತ್ತು.

"ಮಹನೀಯರೆ, ಮಹಿಳೆಯರೆ, ಕಿವಿಗೊಟ್ಟು ಕೇಳಿ......"ಎಲ್ಲರೂ ಆವಾಕ್ಕಾಗಿ, ಒಬ್ಬರನ್ನೊಬ್ಬರು ದಿಟ್ಟಿಸಿ ನೋಡುತ್ತಾ ನಿಂತರು. 'ಯಾರ ಧ್ವನಿಯದು ?' ಯಾರಿಗೂ ಅರ್ಥವಾಗಲಿಲ್ಲ.

ಧ್ವನಿ ಮತ್ತೆ ಮುಂದುವರಿಯಿತು.

"ನಿಮ್ಮ ಮೇಲೆ ಈ ಕೆಳಕಂಡ ಆಪಾದನೆಗಳನ್ನು ಹೊರಿಸಲಾಗಿದೆ—

ಡಾ॥ ಆನಂದರಾಜ್....1926 ನೇ ಮೇ 17 ನೇ ತಾರೀಕಿನ ದಿನ ನಿನ್ನ ರೋಗಿ ಶ್ರೀಮತಿ ವಿಮಲಾದೇವಿಯರ ಮರಣಕ್ಕೆ ನೀನು ಕಾರಣನಾಗಿ ದ್ದೀಯೆ....

ಮಿಸ್, ಸುಧಾದೇವಿ ...1920 ನೇ ಸೆಪ್ಟೆಂಬರ್ 7 ನೇ ತಾರೀಕಿನ ದಿನ ಕುಮಾರಿ ಚಂದ್ರಾಳ ಮರಣಕ್ಕೆ ನೀವೇ ಕಾರಣ....

ಕಿಷನ್‌ಚಂದ್....1938 ನೇ ಡಿಸೆಂಬರ್ 11 ನೇ ದಿನ ಹರಿಹರ ನಾಥನನ್ನು ಕೊಲೆಮಾಡಿದ್ದು ನಿನ್ನ ಅಪರಾಧ.....

ಆಶಾದೇವಿ......1937ನೇ ಆಗಸ್ಟ್ 20ನೇ ತಾರೀಕು ಕುಮಾರ ಶಿವ ನಾಥನ ಅಕಾಲ ಮರಣಕ್ಕೆ ನೀನು ಕಾರಣ .....

ಕ್ಯಾ|| ಅಜಯಕುಮಾರ್....1934 ನೇ ಏಪ್ರಿಲ್ ತಿಂಗಳಿನಲ್ಲಿ ಅಸ್ಸಾಂ ಕಾಡಿನಲ್ಲಿ ಹತ್ತಾರು ನಾಗಾ ಜನರ ಗುಂಪೊಂದರ ವಿನಾಶಕ್ಕೆ ಕಾರಣನಾದದ್ದು ನಿನ್ನ ಅಪರಾಧ....

ಜನರಲ್ ಗೋವಿಂದನಾಯರ್.....1917 ನೇ ಮಾರ್ಚಿ 1 ನೇ ತಾರೀಕು ನಿನ್ನ ಪತ್ನಿಯ ಪ್ರೇಮಿ ಕ್ಯಾ|| ಕೃಷ್ಣಚಂದನನ್ನು ಕೊಲೆಮಾಡಿದವರು ನೀವು......

ಧರ್ಮಸಿಂಗ್ .. 1928 ನೇ ಫೆಬ್ರುವರಿ 16 ನೇ ತಾರೀಕು ನಿರಪರಾಧಿಯಾದ ತರುಣ ರಘುವೀರನಿಗೆ ಮರಣದಂಡನೆಯನ್ನು ವಿಧಿಸಿದ್ದೀರಿ....

ಶಿವರಾಮ ಕಾರ್ಕಳ ಮತ್ತು ಸರೋಜಮ್ಮ 1930 ನೇ ಜನವರಿಯಲ್ಲಿ ಶ್ರೀಮತಿ ಕುಸುಮಾದೇವಿಯವರ ಅಂತ್ಯಕ್ಕೆ ನೀವೇ ಕಾರಣ....

ಆಪಾದನೆಗೆ ಒಳಗಾಗಿರುವ ಅಪರಾಧಿಗಳೇ....ನಿಮ್ಮ ಪ್ರತಿವಾದಗಳೇನಾದರೂ ಇದೆಯೆ ?"

* * * *

ನಿಷ್ಠುರವಾಗಿ ಎಲ್ಲರನ್ನೂ ಖಂಡಿಸಿದ ಆ ಧ್ವನಿ ನಿಂತಿತು. ಎಲ್ಲರೂ ಸ್ತಂಭೀಭೂತರಾಗಿ ನಿಂತಿದ್ದರು. ಮರುಕ್ಷಣದಲ್ಲಿ ಶಿವರಾಮನ ಕೈಯಿಂದ ಹಾಲಿನ ಟ್ರೇ ಜಾರಿ ಕೆಳಗೆ ಬಿದ್ದು ಕ್ಷಣಕಾಲ ಕರ್ಣಕಠೋರವಾದ ಶಬ್ದವನ್ನುಂಟುಮಾಡಿತು. ಅದೇ ಹೊತ್ತಿಗೆ ಡ್ರಾಯಿಂಗ್ ರೂಂನ ಹೊರಗಡೆ ಯಾರೋ ಕಿರಚಿಕೊಂಡು ಓಡಿಬಂದ ಶಬ್ದ... ಎಡವಿ ದೊಪ್ಪನೆ ಬಿದ್ದ ಶಬ್ದ. ಅಜಯ ಸರ್ರನೆ ಎದ್ದು ಡ್ರಾಯಿಂಗ್ ರೂಂನಿಂದ ಹೊರನುಗ್ಗಿದ. ವರಾಂಡದಲ್ಲಿ ಸರೋಜಮ್ಮ ಬಿದ್ದಿದ್ದಳು. ಅಲ್ಲಿಂದಲೇ ಅಜಯ "ಆನಂದರಾಜ್...." ಎಂದು ಕೂಗಿದ. ಅಜಯ ಆನಂದರಿಬ್ಬರೂ ಸೇರಿ ಸರೋಜಮ್ಮನನ್ನು ಎತ್ತಿಕೊಂಡು ಬಂದು ಸೋಫಾದ ಮೇಲೆ ಮಲಗಿಸಿದರು. ಆನಂದ ಅವಳನ್ನು ಪರೀಕ್ಷಿಸಿ ನೋಡಿ, "ಏನೂ ಇಲ್ಲ....ಹೆದರಿಕೆಯಿಂದ ಎಚ್ಚರ ತಪ್ಪಿದೆ.... ಎರಡು ನಿಮಿಷ....ಸರಿಹೋಗುತ್ತದೆ"ಎಂದು ಗಾಳಿ ಬೀಸತೊಡಗಿದ. ಧರ್ಮಸಿಂಗ್ ಶಿವರಾಮನ ಕಡೆಗೆ ತಿರುಗಿ, "ಸ್ವಲ್ಪ ಹಾಲು ತೆಗೆದುಕೊಂಡು ಬನ್ನಿ... ಹಾಗೇ ಸ್ವಲ್ಪ ತಣ್ಣೀರು" ಎಂದರು.

ಥರಥರನೆ ನಡುಗುತ್ತಿದ್ದ ಶಿವರಾಮ ಮರುಮಾತಿಲ್ಲದೆ ಹಾಲು ತರಲು ಒಳಹೋದ.

ಆಶಾದೇವಿ ಕೋಪ ಮಿಶ್ರಿತ ಭಯದಿಂದ ಕೇಳಿದಳು. "ಯಾರ ಧ್ವನಿ ಯದು ? ಎಲ್ಲಿಂದ ಬಂತು ?"

ಗೋವಿಂದನಾಯರ ಮುಖ ಬಿಳುಪೇರಿತ್ತು. ಅವರು ಗೊಣಗುಟ್ಟಿದರು "ಏನಿವೆಲ್ಲಾ ಹುಡುಗಾಟ, ಕುಚೋದ್ಯ ಮಿತಿಮೀರಿತು...." ಅವರ ತುಟಿ ಗಳು ನಡಗುತ್ತಿದ್ದವು.

ಕಿಷನ್‌ಚಂದ್ ಮುಖದಲ್ಲಿ ಹರಿಯುತ್ತಿದ್ದ ಬೆವರನ್ನು ಒರಸಿಕೊಳ್ಳು ತ್ತಿದ್ದ ಧರ್ಮಸಿಂಗ್ ಧೈರ್ಯವಾಗಿದ್ದಂತೆ ತೋರುತ್ತಿದ್ದರೂ ಒಳಗೊಳಗೇ ಅವರು ನಡಗುತ್ತಿದ್ದರು. ಎಂಬುದು ಅವರ ಚರ್ಯೆಯಿಂದ ಸ್ಪಷ್ಟವಾಗಿತ್ತು. ಸುಧಾ ಸ್ವಲ್ಪಮಟ್ಟಿಗೆ ಧೈರ್ಯದಿಂದಲೇ ಸರೋಜಮ್ಮನನ್ನು ಉಪಚರಿಸು ತ್ತಿದ್ದಳು. ಇಡೀ ವಾತಾವರಣ ಕಲಕಿದಂತಾಗಿತ್ತು. ಧರ್ಮಸಿಂಗ್ ಹೆದರಿದ ಕಣ್ಣುಗಳಿಂದ ಸುತ್ತಲೂ ನೋಡುತ್ತಿದ್ದರು.

ಅಜಯಕುಮಾರ್ ಮತ್ತೆ ಅದೇ ಪ್ರಶ್ನೆ ಹಾಕಿದ, "ಅಂದಹಾಗೆ.... ಆ ಧ್ವನಿ....ಇಲ್ಲೇ ಮಾತನಾಡಿದಂತೆ ಕೇಳಿಬಂತು....ಯಾರದು ?"

ಆಶಾ ನಡಗುತ್ತಾ "ಹೌದು....ಹೌದು....ಇಲ್ಲೇ....ಯಾರದು ?" ಎಂದಳು. ಅಜಯ ಒಂದು ಬಾರಿ ಸುತ್ತಲೂ ಪರೀಕ್ಷಿಸತೊಡಗಿದ. ಅವನ ಚುರುಕಾದ ಕಣ್ಣುಗಳು ನಿದಾನವಾಗಿ ಒಂದು ವಸ್ತುವಿನಿಂದ ಮತ್ತೊಂದು ವಸ್ತುವಿಗೆ ತಿರುಗತೊಡಗಿತು. ತಟಕ್ಕನೆ ಅವು ಅಲ್ಲಿನ ಬಾಗಿಲೊಂದರ ಮೇಲೆ ನಿಂತವು. ಡ್ರಾಯಿಂಗ್ ರೂಂನಲ್ಲಿ ಮೂರು ಬಾಗಿಲುಗಳಿದ್ದವು. ಒಂದು ಡೈನಿಂಗ್ ಹಾಲಿಗೆ....ಎರಡನೆಯದು ವಿಶಾಲವಾದ ಲೈಬ್ರರಿ ರೂಂಗೆ ....ಮೂರನೆಯ ಬಾಗಿಲ ಮೇಲೆ ಅವನ ನೋಟ ನಾಟಿತು. ಅವನಿಗೆ ಏನೋ ಹೊಳೆದಂತಾಗಿ ಸರ್ರನೆ ಎದ್ದು ಹೋಗಿ ಬಾಗಿಲನ್ನು ನೂಕಿ ಒಳ ನುಗ್ಗಿದ. ಮರುಕ್ಷಣದಲ್ಲಿ ರಹಸ್ಯವನ್ನು ಭೇದಿಸಿದ ತೃಪ್ತಿಯ ಮಾತು ಅವ ನಿಂದ ಹೊರಬಿತ್ತು. "ಅಯ್ಯೋ....ಇಷ್ಟೇನೆ....ಸರಿ....ಸರಿ" ಎಂದು ನಗ ತೊಡಗಿದ. ಸರೋಜಳಿಗೆ ಗಾಳಿ ಬೀಸುತ್ತಿದ್ದ ಸುಧಾದೇವಿಯ ಹೊರತು

ಉಳಿದವರೆಲ್ಲರೂ ಅಜಯನನ್ನು ಹಿಂಬಾಲಿಸಿದರು. ಆ ಕೊಠಡಿ ಅಷ್ಟೇನೂ ದೊಡ್ಡದಲ್ಲ. ಬಾಗಿಲ ಪಕ್ಕದಲ್ಲೇ ಗೋಡೆಗೆ ಸೇರಿದಂತೆ ಒಂದು ಮೇಜು· ಅದರ ಮೇಲೆ ಟ್ರಂಪೆಟ್‌ನಿಂದ ಕೂಡಿದ ಗ್ರಾಮೋಫೋನ್. ಅದರ ಮೇಲೆ ಒಂದು ರಿಕಾರ್ಡು. ಟ್ರಂಪೆಟ್ಟಿನ ಬಾಯನ್ನು ಗೋಡೆಗೆ ಸೇರಿಸಲಾಗಿತ್ತು. ಅಜಯ ಅದನ್ನು ಪಕ್ಕಕ್ಕೆ ಸರಿಸಿ ನೋಡಿದ. ಗೋಡೆಯಲ್ಲಿ ನಾಲ್ಕಾರು ರಂಧ್ರಗಳನ್ನು ಕೊರೆಯಲಾಗಿತ್ತು. ಮತ್ತೆ ವೈಂಡ್ ಮಾಡಿ, ಸೌಂಡ್ ಬಾಕ್ಸನ್ನು ರಿಕಾರ್ಡಿನ ಮೇಲಿಟ್ಟ, ಮತ್ತೆ ಅದೇ ಧ್ವನಿ....

"ಮಹನೀಯರೆ....ಮಹಿಳೆಯರೆ.....ಕಿವಿಗೊಟ್ಟು ಕೇಳಿ........ನಿಮ್ಮ ಮೇಲೆ ಈ ಅಪಾದನೆಗಳನ್ನು .... ...."

ಆಶಾ ಕಿರುಚಿದಳು....."ನಿಲ್ಲಿಸಿ .....ನಿಲ್ಲಿಸಿ.....ಕರ್ಕಶಧ್ವನಿ"

ಆನಂದ ತೃಪ್ತಿಯ ನಿಟ್ಟುಸಿರನ್ನು ಬಿಡುತ್ತಾ ಹೇಳಿದ...."ಶುದ್ಧ ನಾಚಿಕೆಯಿಲ್ಲದ ಕುಚೋದ್ಯ.... ..."

"ಹಾಗಾದರೆ ಇದು ಕೇವಲ ಕುಚೇಷ್ಟೆಯೆಂದು ನಿಮ್ಮ ಅಭಿಪ್ರಾಯವೆ ?" ಎಂದ ಅಜಯ

"ಕುಚೇಷ್ಟೆಯಲ್ಲದೆ ಮತ್ತೇನು?" ಎಂದ ಗೋವಿಂದನಾಯರ್ ಧರ್ಮಸಿಂಗರ ಕಡೆಗೆ ತಿರುಗಿ...."ನಿಮ್ಮ ಅಭಿಪ್ರಾಯವೇನು" ಎಂದರು

"ನನಗೂ ಹಾಗೇ ಎನಿಸುತ್ತದೆ ...ಆದರೆ "

ಕಿಷನ್‌ಚಂದ್ ಮಧ್ಯೆ ಬಾಯಿಹಾಕಿ, "ನೀವೆಲ್ಲಾ ಮುಖ್ಯವಿಷಯವನ್ನೇ ಮರೆತಿದ್ದೀರಿ......ಈ ರಿಕಾರ್ಡನ್ನು ಹಾಕಿದವರುಯಾರು ? ಅದನ್ನು ವಿಚಾರಿಸಬೇಡವೆ ?" ಎಂದ.

"ಅಂದ ಹಾಗೆ ಮೊದಲು ಅದರ ವಿಚಾರವಾಗಬೇಕು....ಶಿವರಾಮು ಎಲ್ಲಿ ?"

ಶಿವರಾಮು ಒಂದು ಗ್ಲಾಸಿನಲ್ಲಿ ಹಾಲನ್ನೂ, ಮತ್ತೊಂದರಲ್ಲಿ ನೀರನ್ನೂ ತೆಗೆದುಕೊಂಡು ಬಂದು ಸರೋಜಳ ಪಕ್ಕದಲ್ಲಿ ಕುಳಿತು, "ಸರೂ....ಇಲ್ಲಿ ನೋಡು....ನಾನು ಶಿವರಾಮು... ಮಾತಾಡು" ಎಂದು ನೀರನ್ನು ಚುಮು

ಕಿಸಿದ. ಸರೋಜ ಮೆಲ್ಲನೆ ಕಣ್ಣು ಬಿಡುತ್ತ ಎಲ್ಲರನ್ನೂ ಭಯಗ್ರಸ್ಥ ದೃಷ್ಟಿಯಿಂದ ನೋಡತೊಡಗಿದಳು.

"ಮಾತಾಡು....ಸರೂ ...ನಾನು ...ಶಿವರಾಮು"

"ಏನೂ ಇಲ್ಲಮ್ಮ ಹೆದರಿಕೆಯಿಂದ ಬೆಚ್ಚಿಬಿದ್ದಿದ್ದೀರಿ...." ಎಂದು ಧೈರ್ಯ ಹೇಳಿದ ಆನಂದ.

"ಹೌದು ... ನನಗೆ ಹೆದರಿಕೆಯಾಯ್ತು ಆ ಧ್ವನಿ ಕೇಳಿ"

ಆನಂದ ತಿರುಗಿ "ಎಲ್ಲಿ ಆ ಹಾಲು ಈ ಕಡೆ ಕೊಡಿ"ಎನ್ನುತ್ತಾ ಕೈ ಚಾಚಿದ. ಯಾರೋ ಅದನ್ನು ಎತ್ತಿ ಆನಂದನ ಕೈಗೆ ಕೊಟ್ಟರು. ಅದನ್ನು ಸರೋಜಳ ಬಾಯಹತ್ತಿರಕ್ಕೆ ತಂದು "ಈ ಹಾಲನ್ನು ಕುಡಿಯಿರಿ" ಎಂದ. ಸರೋಜ ತಾನೇ ಅದನ್ನು ಕೈಗೆ ತೆಗೆದುಕೊಂಡು ಹಾಲನ್ನು ಪೂರ್ತಿಯಾಗಿ ಕುಡಿದಳು. ಅವಳ ಮುಖದಲ್ಲಿ ಸ್ವಲ್ಪ ಗೆಲುವು ಮೂಡಿತು. "ಪರವಾಗಿಲ್ಲ.... ಈಗ ನಾನು ಸರಿಯಾಗಿದ್ದೀನಿ...." ಎಂದು ಸೋಫಾದ ಮೇಲೆ ಎದ್ದು ಕುಳಿತಳು.

"ಶುದ್ಧ ಹುಡುಗಾಟ........ಸುಳ್ಳಿನಕಂತೆ" ಎಂದು ಗೊಣಗುಟ್ಟಿದ ಶಿವರಾಮು. ಧರ್ಮಸಿಂಗ್ ಅವನ ಕಡೆ ತಿರುಗಿ ಕೇಳಿದರು.–"ಆ ಗ್ರಾಮೋಫೋನ್ ರಿಕಾರ್ಡ್ ಹಾಕಿದವರು ಯಾರು ?....ನೀನೇನು?

ಪ್ರಶ್ನೆಯನ್ನು ಕೇಳಿ ಶಿವರಾಮು ಮೂಕನಾದ.

"ಇರಲಿ....ಹೇಳು....ಮುಚ್ಚುಮರೆ ಬೇಡ...."

ನಡುಗುವ ದನಿಯಲ್ಲಿ ಶಿವರಾಮು ಹೇಳಿದ. "ನಿಜವಾಗಲೂ ಅದೇನು ಎಂದು ನನಗೆ ಗೊತ್ತಿರಲಿಲ್ಲ.....ದೇವರಾಣೆ....ಯಾವುದೋ ಸಂಗೀತದ ಪ್ಲೇಟು ಎಂದು ತಿಳಿದಿದ್ದೆ."

"ಅದೇನೋ ನಿಜ........ಆದರೆ ಹಾಕಲು ಕಾರಣ ?"

"ನನಗಾದ ಅಪ್ಪಣೆಯಂತೆ ಅದನ್ನು ಹಾಕಿದೆ."

"ಯಾರ ಅಪ್ಪಣೆ ?"

"ಮಾಧವಸಾಹೇಬರದು"

"ವಿವರವಾಗಿ ಹೇಳು....ಏನೆಂದು ನಿನಗೆ ಅಪ್ಪಣೆಯಾಗಿತ್ತು ?"

"ಮೇಜಿನ ಡ್ರಾಯರಿನಲ್ಲಿರುವ ಪ್ಲೇಟನ್ನು ಊಟವಾದ ಮೇಲೆ ನಾನು ಗ್ರಾಮಾಫೋನ್ ಮೇಲೆ ಇಡಬೇಕು....ನಾನು ಎಲ್ಲರಿಗೂ ಹಾಲುತಂದ ಸಮಯದಲ್ಲಿ ಸರೋಜ ಅದರ ಮೇಲೆ ಮುಳ್ಳಿಟ್ಟು ಹಾಡುವಂತೆ ಮಾಡಬೇಕು"

"ಕಥೆ ಬಹಳ ಚೆನ್ನಾಗಿದೆ" ಎಂದರು ಧರ್ಮಸಿಂಗ್.

"ಕಥೆಯಲ್ಲ....ಇದುಸತ್ಯ... ಖಂಡಿತವಾಗಲೂ ಸತ್ಯ......"

ಅಜಯ ಕೇಳಿದ "ಅದರ ಮೇಲೆ ಏನಾದರೂ ಬರೆಯಲಾಗಿತ್ತೆ ?"

" ಹ್ಞೂ........ಚರಮ ಗೀತೆ" ಎಂದಿತ್ತು.

* * *

ಜನರಲ್ ಗೋವಿಂದನಾಯರು ಸಿಡಿದೆದ್ದರು. ಅವರ ಧ್ವನಿ ಭಯ ಮಿಶ್ರಿತ ಕೋಪದಿಂದ ನಡುಗುತ್ತಿತ್ತು. "ಇದೆಲ್ಲಾ ಶುದ್ಧ ತಿಳಿಗೇಡಿತನ.... ಕುಹಕ....ಈ ರೀತಿ ಸುಳ್ಳು ಆಪಾದನೆಗಳನ್ನು ಹೊರಿಸುವುದನ್ನು ಎಳ್ಳಷ್ಟೂ ಸಹಿಸುವಂತಿಲ್ಲ.....ಈ ಮಾಧವನ್ ಯಾರೇ ಆಗಲಿ...... ಅವರನ್ನು ಸುಮ್ಮನೆ ಬಿಡಬಾರದು."

"ಹೌದು ಈ ಅವಮಾನಕ್ಕೆ ಸರಿಯಾದ ಪ್ರತೀಕಾರ ಮಾಡಬೇಕು. ಅವರು ಇಲ್ಲಿಗೆ ಬಂದೊಡನೆಯೇ ಅವರ ಈ ವರ್ತನೆ ಬಗ್ಗೆ ಸರಿಯಾದ ವಿಚಾರಣೆ ನಡೆಸಬೇಕು." ಎಂದಳು ಸುಧಾ.

ಧರ್ಮಸಿಂಗ್ ಮಧ್ಯೆ ಬಾಯಿ ಹಾಕಿದರು. ಮೂವತ್ತು ವರ್ಷಗಳ ಕಾಲ ನ್ಯಾಯಾಧೀಶರಾಗಿ ಕೋರ್ಟಿನಲ್ಲಿ ವಹಿಸುತ್ತಿದ್ದ ಅಧಿಕಾರವಾಣಿ ಅವರಿಗೆ ಮತ್ತೆ ಬಂದಿತ್ತು. ಅವರೆಂದರು–

"ನಿಜ.... ...ನಾವು ಈ ಪರಿಸ್ಥಿತಿಯನ್ನು ಕೂಲಂಕಷವಾಗಿ ಪರಿಶೀಲಿಸಬೇಕು. ಶಿವರಾಮ್ ನಿನ್ನ ಹೆಂಡತಿಗೆ ವಿಶ್ರಾಂತಿ ಬೇಕಾಗಿದೆ. ಅವಳನ್ನು ಕರೆದುಕೊಂಡು ಹೋಗಿ ಮಲಗಿಸಿ ಬೇಗ ಬಂದು ಬಿಡು"

"ಆಗಲೀ ಸಾರ್.... .."ಎಂದು ಶಿವರಾಮು ಮೇಲೆದ್ದ. ಆನಂದ ಅವನ ಸಹಾಯಕ್ಕೆ ಹೊರಟ. ಇಬ್ಬರೂ ಸೇರಿ ಸರೋಜಮ್ಮನನ್ನು ನಿದಾನವಾಗಿ ನಡೆಸಿಕೊಂಡು ಹೊರಟರು.

ಕಿಷನ್‌ಚಂದ್ ಅಜಯನ ಕಡೆ ತಿರುಗಿ "ನನಗೇನೋ ಸ್ವಲ್ಪ ವಿಸ್ಕಿ

ಬೇಕಾಗಿದೆ.........ಹೋಗಿ ತರುತ್ತೀನಿ" ಎಂದೆದ್ದು ಹೊರಟ. ಒಂದೆರಡು ನಿಮಿಷಗಳನಂತರ ಒಂದು ಟ್ರೇಯಲ್ಲಿ ಐದಾರು ತುಂಬಿದ ಸೀಸೆಗಳು, ಗ್ಲಾಸುಗಳನ್ನು ತಂದು ಮೇಜಿನ ಮೇಲಿಟ್ಟ. ವೈನ್, ಬೀರ್, ವಿಸ್ಕಿ ಮೊದಲಾದ ಮದ್ಯಗಳು ಅಲ್ಲಿದ್ದವು. ಸುಧಾ ಒಂದು ಸೀಸೆ ಸೋಡ ಒಡೆದು ಕುಡಿದಳು. ಅಷ್ಟರಲ್ಲಿ ಶಿವರಾಮು, ಆನಂದರು ಹಿಂತಿರುಗಿದರು.

ಆನಂದ ಧರ್ಮಸಿಂಗರ ಕಡೆ ತಿರುಗಿ "ಏನೂ ಚಿಂತೆಯಿಲ್ಲ.......... ಚೆನ್ನಾಗಿ ನಿದ್ರೆ ಬರುವಂತೆ ಒಂದು ಡೋಸ್ ಔಷಧಿ ಕೊಟ್ಟಿದ್ದೇನೆ" ಎಂದ.

ಕಿಷನ್‌ಚಂದ್ ಮೂರು ನಾಲ್ಕುಗ್ಲಾಸು ಮದ್ಯವನ್ನು ಕುಡಿದೂ ಅತೃಪ್ತನಾಗಿದ್ದ. ಅಜಯ ಮದ್ಯವನ್ನು ಮುಟ್ಟದೆ ಸಿಗರೇಟಿನಲ್ಲೇ ತೃಪ್ತನಾದ. ಧರ್ಮಸಿಂಗರು ವರ್ಜೀನಿಯಾ ಸಿಗಾರೊಂದನ್ನು ಹಚ್ಚಿಕೊಂಡು ಮತ್ತೆ ವಿಚಾರಣೆ ಆರಂಭಿಸಿದರು.

"ಶಿವರಾಮು.... ಈ ಮಾಧವನ್ ಎಂಬುವರು ಯಾರು ?"

"ಈ ದ್ವೀಪದ ಒಡೆಯರು. ಅವರು ಕೋಟ್ಯಾಧೀಶ್ವರರೆಂದು ಕೇಳಿದ್ದೀನಿ"

"ಅದು ಎಲ್ಲರಿಗೂ ಗೊತ್ತು....ನಿನಗೆ ಅವರ ವಿಷಯವಾಗಿ ಮತ್ತೇನು ವಿವರಗಳು ತಿಳಿದಿವೆ ?"

"ನನಗೆ ಏನೂ ಗೊತ್ತಿಲ್ಲ....ಅವರನ್ನು ಇದುವರೆವಿಗೂ ನಾನು ನೋಡಿಯೇ ಇಲ್ಲ."

ಗೋವಿಂದನ್ ಆಶ್ಚರ್ಯದಿಂದ "ಆ್ಞ... ನೋಡೇ ಇಲ್ಲವೆ ?" ಎಂದು ಕಣ್ಣರಳಿಸಿದರು.

"ಇಲ್ಲ.........ನಾವು ಇಲ್ಲಿಗೆ ಬಂದು ಮೂರು ದಿನವಾಯ್ತು"

"ಹಾಗಾದರೆ..ನಿಮ್ಮನ್ನು ಇಲ್ಲಿನ ಕೆಲಸಕ್ಕೆ ನೇಮಿಸಿದವರು ಯಾರು?"

"ನಮ್ಮ ಸಂಘದ ಏಜಂಟರ ಕಾಗದದಿಂದ ತಿಳಿಯಿತು. ಏಜಂಟರ ಸೂಚನೆಯಂತೆ ನಾವು ಇಲ್ಲಿಗೆ ಬಂದಿದ್ದು"

"ಆ ಕಾಗದ ನಿನ್ನಲ್ಲಿದೆಯೆ ?"

"ಇಲ್ಲ ನಾನು ಅದನ್ನು ಇಟ್ಟುಕೊಳ್ಳಲಿಲ್ಲ"

"ಹ್ಞೂ.....ಸರಿ ...ಆಮೇಲೆ?"

"ಕಾಗದದ ಪ್ರಕಾರ ನಾವು ಆರನೆಯ ತಾರೀಕು ಇಲ್ಲಿಗೆ ಬಂದೆವು. ಅಡಿಗೆಗೆ ಬೇಕಾದ ಎಲ್ಲಾ ಏರ್ಪಾಡುಗಳೂ ಸಿದ್ಧವಾಗಿದ್ದುವು."

"ನೀವು ಇಲ್ಲಿಗೆ ಬಂದಾಗ ಇಲ್ಲಿ ಯಾರಿದ್ದರು ?"

"ಯಾರೂ ಇರಲಿಲ್ಲ........"

"ಆಳುಗಳು ?"

"ಇಲ್ಲ.... ಒಂದು ನರಪಿಳ್ಳೆಯೂ ಇರಲಿಲ್ಲ. ಇಡೀ ದ್ವೀಪವನ್ನು ಹುಡುಕಿದ್ದಾಯ್ತು...."

"ಆಮೇಲೆ ?"

"ನಿನ್ನೆ ಮತ್ತೊಂದು ಕಾಗದ ಬಂತು. ಡ್ರೈವರ್ ಶ್ಯಾಮಲಾಲನೇ ತಂದು ಕೊಟ್ಟ......ಕೆಲವು ಅತಿಥಿಗಳು ಇಲ್ಲಿಗೆ ಬರುತ್ತಾರೆ......ಅವರನ್ನು ಸರಿಯಾದ ರೀತಿಯಲ್ಲಿ ಸತ್ಕರಿಸಬೇಕು ಎಂದಿತ್ತು. ಅತಿಥಿಗಳ ಹೆಸರುಗಳನ್ನು ಕೊಡಲಾಗಿತ್ತು.....ಮತ್ತೆ ಈ ಬೆಳಿಗ್ಗೆ ಒಂದು ಕಾಗದ ಬಂತು. 'ಯಾವುದೋ ಕಾರಣದಿಂದ ನಗರದಲ್ಲೇ ನಿಲ್ಲಬೇಕಾಗಿದೆ.....ನಾಳೆ ಬೆಳಿಗ್ಗೆ ಖಂಡಿತ ಬರುತ್ತೇವೆ....ಉಪಚಾರ ಸರಿಯಾಗಿರಲಿ....'ಎಂದಿತ್ತು. ಅದರಲ್ಲೇ ಗ್ರಾಮೋಫೋನ್‌ಪ್ಲೇಟಿನ ವಿಷಯವನ್ನೂ ಸೂಚಿಸಿದ್ದರು.

"ಆ ಕಾಗದವಿದೆಯೆ ?"

"ಓಹೊ....ಇದೆ" ಎಂದು ಎದ್ದು ಹೋಗಿ, ಶಿವರಾಮ ಕಾಗದವನ್ನು ತಂದು ಕೊಟ್ಟ. ಧರ್ಮಸಿಂಗ್ ಕುತೂಹಲದಿಂದ ಕಾಗದವನ್ನು ಓದಿ ನೋಡಿದರು. ಹೊಟೇಲ್ ಟಾಜ್‌ನಿಂದ ಅದನ್ನು ಬರೆಯಲಾಗಿತ್ತು. ಅಜಯ, ಆನಂದರೂ ಅವರ ಬಳಿ ಬಂದು ನಿಂತು ಅದನ್ನು ಓದಿಕೊಂಡರು.

ಕಾಗದವನ್ನು ಶಿವರಾಮನ ಕೈಗೆ ಕೊಡುತ್ತಾ, ಧರ್ಮಸಿಂಗ್ "ನನಗೆ ತೋರುವ ಮಟ್ಟಿಗೆ ಈಗ ಈ ದ್ವೀಪದ ಒಡೆಯರ ಬಗ್ಗೆ ನಮಗೆ ಗೊತ್ತಿರುವ ವಿಷಯಗಳನ್ನು ಸಂಗ್ರಹಿಸಬೇಕಾಗಿದೆ. ಆಗ ಅವರಾರು ಎಂಬ ಸಮಸ್ಯೆಗೆ ಉತ್ತರವಾದರೂ ಸಿಗಬಹುದು" ಎಂದು ಕ್ಷಣ ಕಾಲ ತಡೆದು, ಸುತ್ತಲೂ ನೋಡಿ, "ನಾವೆಲ್ಲರೂ "ಮಾಧವನ್‌ರವರ ಅತಿಥಿಗಳಾಗಿ ಬಂದಿದ್ದೀವಿ.

ಇಲ್ಲಿಗೆ ಬರಲು ಒದಗಿದ ಸನ್ನಿವೇಶಗಳನ್ನು ಎಲ್ಲರೂ ವಿವರಿಸಿದರೆ ಸಹಾಯ ವಾದೀತು" ಎಂದರು. ಮೊದಲು ಅವರ ದೃಷ್ಟಿ ಸುಧಾ ಕಡೆಗೆ ತಿರುಗಿತು.

"ಎಲ್ಲ ವಿಚಿತ್ರವಾಗಿದೆ........ ನನ್ನ ಸ್ನೇಹಿತೆಯೊಬ್ಬಳಿಂದ ಒಂದು ಕಾಗದ....ಹೆಸರೂ ಸ್ಪಷ್ಟವಾಗಿರಲಿಲ್ಲ.... ನೀಲಾಯಾದವ್‌ವೋ....ಲೈಲಾ ಮಧುನೋ ಓದಲು ಅಸಾಧ್ಯವಾಗಿತ್ತು. ನನಗೆ ತಿಳಿದಂತೆ ಮಾಧವನ್ ಎಂಬ ಹೆಸರಿನ ಮಿತ್ರರು ನನಗ್ಯಾರೂ ಇರಲಿಲ್ಲ. ಬೇಸಗೆಯನ್ನು ಆನಂದ ವಾಗಿ ಕಳೆಯಲು ಆಹ್ವಾನವಿತ್ತು." ಎಂದು ಹೇಳಿ ತನಗೆ ಬಂದಿದ್ದ ಕಾಗದ ವನ್ನು ತಂದು ಕೊಟ್ಟಳು.

ಕಾಗದವನ್ನು ಓದಿನೋಡಿ ಧರ್ಮಸಿಂಗ್ ಆಶಾದೇವಿಯ ಕಡೆಗೆ ತಿರುಗಿದರು. ತನ್ನನ್ನು ಮಾಧವ ಸಾಹೇಬರ ರಾಣಿಯವರು ತಮ್ಮ ಕಾರ್ಯದರ್ಶಿಯನ್ನಾಗಿ ನೇಮಿಸಿಕೊಂಡಿರುವಂತೆ ಬಂದ ಪತ್ರದ ವಿಷಯ ವನ್ನು ಅವಳು ವಿವರಿಸಿದಳು.

ಆನಂದರಾಜ್ ತಾನೇ ತನ್ನ ಕಥೆಯನ್ನು ಆರಂಭಿಸಿದ.

"ನನ್ನ ಉದ್ಯೋಗದ ಮೇಲೆ ಬಂದೆ. ಮಾಧವನ್‌ರವರ ಪತ್ನಿಯ ಚಿಕಿತ್ಸೆಗಾಗಿ ನನ್ನನ್ನು ಕರೆಯಲಾಗಿತ್ತು" ಎಂದ.

"ಈ ಹಿಂದೆ ಅವರ ಪರಿಚಯ ನಿಮಗಿತ್ತೆ ?"

"ಇಲ್ಲ......ನನ್ನ ಸ್ನೇಹಿತರೊಬ್ಬರ ಹೆಸರನ್ನು ಸೂಚಿಸಿದ್ದರು. ಆದರೆ ಆ ಸ್ನೇಹಿತನನ್ನು ನಾನೇ ಮರೆತಿದ್ದೇನೆ."

ಗೋವಿಂದನಾಯರ್ ನಿಧಾನವಾಗಿ ಬಾಯಿಬಿಟ್ಟರು. "ನನ್ನ ಆಪ್ತ ಸ್ನೇಹಿತರುಗಳ ಹೆಸರಿಲ್ಲದಿದ್ದರೆ ನಾನು ಖಂಡಿತ ಇಲ್ಲಿಗೆ ಬರುತ್ತಿರ ಲಿಲ್ಲ. ಹಳೆಯ ಸವಿನೆನಪುಗಳನ್ನು ನೆನಸಿಕೊಂಡು ನಾಲ್ಕು ದಿನ ಮಿತ್ರ ರೊಡನೆ ವಿಹರಿಸುವಂತೆ ನನಗೆ ಆಹ್ವಾನ ಬಂದಿತ್ತು......ಆ ಕಾಗದ ಈಗ ನನ್ನ ಹತ್ತಿರವಿಲ್ಲ." ಎಂದು ಹೇಳಿ ಸೋಫಾದ ಮೇಲೆ ಒರಗಿದರು. ಈ ವಿಚಾ ರಣೆಯಲ್ಲಿ ಅವರಿಗೆ ಸ್ವಲವೂ ಕುತೂಹಲವಿರಲಿಲ್ಲ.

"ಅಜಯ ಕುಮಾರ್" ಎಂದರು ಧರ್ಮಸಿಂಗ್

ಕ್ಷಣಕಾಲ ಅಜಯ ನಿಜವನ್ನು ಹೇಳಲು ಹಿಂಜರಿದ. ಆದರೆ ತಾನು

ಯಾವ ಅಕಾರ್ಯಕ್ಕೂ ಒಪ್ಪಿಕೊಂಡು ಬಂದವನಲ್ಲ, ಎಂಬುದು ಖಚಿತವಾಗಿತ್ತು. ಅವನು ಧೈರ್ಯವಾಗಿ ನುಗಿದ. "ಹೀಗೇ ಪರಸ್ಪರ ಸ್ನೇಹದ ಪ್ರಸ್ತಾಪ. ಯಾವುದೋ ಸಾಹಸೋದ್ಯಮದಲ್ಲಿ ನನ್ನ ಸೇವನ್ನು ಕೇಳಲಾಗಿತ್ತು." ಎಲ್ಲರೂ ಚಕಿತರಾದರು.

ಧರ್ಮಸಿಂಗ್ ಕುತೂಹಲದಿಂದ "ಸಾಹಸೋದ್ಯಮ ?......ಯಾವ ಸಾಹಸ ?"

"ವಿವರಗಳು ನನಗೆ ತಿಳಿದಿರಲಿಲ್ಲ....ಕಾಡಿನಲ್ಲಿ ಬೇಟೆಯಿರಬಹುದು ಎಂದು ನಾನು ಊಹಿಸಿದ್ದೆ......"

ನಂತರ ಧರ್ಮಸಿಂಗ್ ಕಿಷನ್‌ಚಂದನ ಕಡೆ ತಿರುಗಿ "ಈಗ ತಾನೆ ಶಾಂತವಾತಾವರಣವನ್ನು ಕಲಕಿದಂತಹ ಘಟನೆಯನ್ನು ಎದುರಿಸಿದ್ದೀವಿ.... ನಮ್ಮ ಮೇಲಿನ ಸಲ್ಲದ ಆಪಾದದೆಗಳನ್ನು ಕೇಳಿದ್ದೂ ಆಯ್ತು. ಅವು ಸುಳ್ಳಿನ ಕಂತೆಯೇ ಎಂದು ನಮ್ಮೆಲ್ಲರ ಅಭಿಪ್ರಾಯ. ಅದನ್ನು ಮುಂದೆ ವಿಚಾರಿಸೋಣ. ಈಗ ನನಗೊಂದು ಸಣ್ಣ ಸಮಸ್ಯೆ ಒದಗಿದೆ. ಆಪಾದಿತರ ಪಟ್ಟಿಯಲ್ಲಿ ಕೈಲಾಸನಾಥನ ಹೆಸರು ಕೇಳಿಬರಲಿಲ್ಲ. ಅಲ್ಲದೆ ನಮ್ಮ ಗುಂಪಿನಲ್ಲಿಲ್ಲದ ಕಿಷನ್‌ಚಂದ್ ಎಂಬ ಹೆಸರು ಕೇಳಿಬಂತು. ಇದರ ಅರ್ಥ ತಿಳಿಯದಾಗಿದೆ. ನೀವೇನು ಹೇಳುತ್ತೀರಿ ಕೈಲಾಸ್‌ನಾಥ್ ?" ಎಂದರು.

ಕಿಷನ್‌ಚಂದ್ ಗುಟ್ಟನ್ನು ರಟ್ಟುಮಾಡಬೇಕಾಯಿತು. ನಿಧಾನವಾಗಿ ಅವನೆಂದ "ಒಪ್ಪಿಕೊಂಡರೇ ವಾಸಿ......ನನ್ನ ಹೆಸರು ಕೈಲಾಸ್‌ನಾಥ್ ಎಂದಲ್ಲ"

ಹಾಗಾದರೆ ನಿಮ್ಮ ಹೆಸರು "ಕಿಷನ್‌ಚಂದ್" ಎಂದೇ ?"

"ಹೌದು......"

ಅಜಯ ಮಧ್ಯೆ ಬಾಯಿ ಹಾಕಿ "ನೀವು ಸುಳ್ಳು ಹೆಸರಿಟ್ಟುಕೊಂಡು ಬಂದಿರುವುದೇ ಅಲ್ಲದೆ ನೀವು ಭಾರೀ ಸುಳ್ಳುಗಾರರೆಂಬುದು ನನಗೆ ಖಚಿತವಾಗಿದೆ. ಅಸ್ಸಾಂ ಕಾಡುಗಳ ಬಗ್ಗೆ ನೀವು ಹೇಳುತ್ತಿದ್ದ ಮಾತುಗಳನ್ನು ಕೇಳಿದರೆ ನಿಮ್ಮನ್ನು ನಂಬುವಂತಿಲ್ಲ. ನಾನು ಖಂಡಿತವಾಗಿ ಹೇಳಬಲ್ಲೆ. ನೀವು ಅಸ್ಸಾಂ ನೋಡಿಲ್ಲವೆಂದು" ಎಂದ.

ಎಲ್ಲರ ದೃಷ್ಟಿಯೂ ಈಗ ಕಿಷನ್‌ಚಂದನ ಕಡೆಗೆ ತಿರುಗಿತು. ಆನಂದ ಕೆಂಗಣ್ಣಿನಿಂದ ಅವನನ್ನು ನೋಡುತ್ತಾ, ಅವನೆದುರಿಗೆ ಬಂದು ನಿಂತು, "ಹ್ಞೂ.....ನಿಜಾಂಶ ಹೊರಬರಲಿ.....ಮತ್ತೆ ಸುಳ್ಳು ಬೊಗಳಿದರೆ...... .....ನೋಡಿಲ್ಲಿ" ಎನ್ನುತ್ತ ತನ್ನ ಬಿಗಿಮುಷ್ಟಿಯನ್ನು ತೋರಿಸಿದ.

ಕಿಷನ್‌ಚಂದ್ ಧರ್ಮಸಿಂಗರ ಕಡೆಗೆ ತಿರುಗಿ, "ವೇಷಮರೆಸಿಕೊಂಡು ಬಂದದ್ದು ನಿಜ...ಆದರೆ ಅದಕ್ಕಾಗಿಯೇ ಮಾಧವನ್‌ರವರು ನನ್ನನ್ನು ನೇಮಿಸಿದ್ದರು. ನಿಮ್ಮಗಳ ಮೇಲೆ ಕಣ್ಣಿಟ್ಟು ನಿಮ್ಮ ಪ್ರತಿಯೊಂದು ಚಲನ ವಲನಗಳನ್ನು ಸೂಕ್ಷ್ಮವಾಗಿ ಗಮನಿಸುವುದೇ ನನ್ನಪಾಲಿನ ಕೆಲಸವಾಗಿತ್ತು. ನಾನೂ ಒಬ್ಬ ಅತಿಥಿಯಂತೆ ನಿಮ್ಮೊಡನೆ ಬರುವುದೆಂದು ನನಗೆ ಸೂಚಿಸ ಲಾಗಿತ್ತು. ನಿಮ್ಮೆಲ್ಲರ ಹೆಸರುಗಳ ಪಟ್ಟಿಯನ್ನೂ ನನಗೆ ಕಳುಹಿಸಿದ್ದರು" ಎಂದು ವಿವರಿಸಿದ.

"ಇದಕ್ಕೆಲ್ಲಾ ಕಾರಣ ?"

"ವಿವರಗಳನ್ನು ನನಗೆ ತಿಳಿಸಿರಲಿಲ್ಲ. ಆದರೆ ಲೀಲಾವತಿ ಮಾಧವನ್ ರವರ ಅಮೂಲ್ಯ ಆಭರಣಗಳ ಮತ್ತು ಅವರ ಉಯಿಲಿನ ರಕ್ಷಣೆಗಾಗಿರ ಬಹುದು ಎಂದು ನಾನು ಊಹಿಸಿದ್ದೆ."

"ಮಾಧವಸಾಹೇಬರನ್ನು ನೀವು ನೋಡಿದ್ದೀರಾ ?"

"ಇಲ್ಲ....ಎಲ್ಲ ವ್ಯವಹಾರಗಳೂ ಪತ್ರದ ಮೂಲಕ ನಡೆದಿತ್ತು."

ಯಾರಿಗೂ ಅವನ ಮಾತುಗಳಲ್ಲಿ ನಂಬಿಕೆ ಸಾಲದಾಯ್ತು. ಈಗ ಎಲ್ಲರ ಕುತೂಹಲ ಧರ್ಮಸಿಂಗರ ಕಡೆಗೆ ತಿರುಗಿತು. ಅವರು ತಮ್ಮ ಜೇಬಿನಿಂದ ಒಂದು ಕಾಗದವನ್ನು ತೆಗೆದು ಮೇಜಿನಮೇಲಿರಿಸಿ ಹೇಳತೊಡಗಿದರು: "ನನ್ನ ನ್ನಾದರೂ ಒಂದು ಆಹ್ವಾನ ಪತ್ರವೇ ಇಲ್ಲಿಗೆ ಕರತಂದಿತು. ಕಾಗದ ಅಸ್ಪಷ್ಟ ವಾಗಿದ್ದರೂ ಅಲ್ಲಲ್ಲಿ ಕೆಲವು ಮಾತುಗಳು ಸ್ಪಷ್ಟವಾಗಿದ್ದವು. ಅನುಮಾನ ಬರಲು ಕಾರಣವೇ ಇರಲಿಲ್ಲ. ಕೊನೆಯಲ್ಲಿ ಲೀಲಾವತಿಯವರ ರುಜುವಿತ್ತು. ಆ ದಂಪತಿಗಳನ್ನು ಆಗಾಗ್ಗೆ ಕೆಲವು ಕ್ಲಬ್ಬುಗಳಲ್ಲಿ ನೋಡಿದ ನೆನಪಿದೆ. ಆದರೆ ನಿಕಟವಾದ ಪರಿಚಯವೇನೂ ಇರಲಿಲ್ಲ. ದ್ವೀಪದ ಸುಂದರ ವಾತಾವರಣ

....ಇಲ್ಲಿನ ಮಿತ್ರರ ಕೂಟ....ಆನಂದದ ಜೀವನವನ್ನು ಬಯಸಿ ಮರುಳಾಗಿ ಬಂದೆ" ಎಂದು ಮುಗಿಸಿದರು.

ಮುಂದೆ ಏನು ಮಾಡಬೇಕೆಂಬುದು ಯಾರಿಗೂ ತೋಚಲಿಲ್ಲ. ಒಂದೆರಡು ನಿಮಿಷ ಪರಸ್ಪರ ನೋಡುವುದರಲ್ಲಿ ಕಾಲ ಕಳೆದರು.

೪

ಎರಡುನಿಮಿಷ ಕಾಲದ ಮೌನವನ್ನು ಮೊದಲು ಭೇದಿಸಿದವನು ಅಜಯ. ಧರ್ಮಸಿಂಗರ ಕಡೆಗೆ ತಿರುಗಿ ಅವನೆಂದ:

"ಈಗ ನನಗೊಂದು ಯೋಚನೆ ಹೊಳೆದಿದೆ. ನಮ್ಮ ಮೇಲೆ ಹೊರಿಸಲಾಗಿರುವ ಆಪಾದನೆಗಳು ಸುಳ್ಳೇ ಆದರೂ ಒಂದು ವಿಷಯವಂತೂ ನಿರ್ವಿವಾದ. ನಮ್ಮೆಲ್ಲರನ್ನೂ ಈ ರೀತಿ ಇಲ್ಲಿ ಸೇರಿಸಿ ಕುಚೋದ್ಯ ನಡೆಸುತ್ತಿರುವವನಿಗೆ ನಮ್ಮೆಲ್ಲರ ಪರಿಚಯವಿರುವಂತೆ ತೋರುತ್ತದೆ.....ಅಲ್ಲವೇ ?"

ಕ್ಷಣಕಾಲ ಯೋಚಿಸಿ ಧರ್ಮಸಿಂಗರು ಅವನ ಮಾತನ್ನು ಒಪ್ಪುವಂತೆ ತಲೆದೂಗುತ್ತಾ, "ನನಗೂ ಹಾಗೇ ತೋರುತ್ತಿದೆ. ನಮಗೆ ಬಂದಿರುವ ಪತ್ರಗಳನ್ನು ನೋಡಿದರೆ ಅವನಿಗೆ ನಮ್ಮೆಲ್ಲರ ವಿಷಯ ಬಹುಮಟ್ಟಿಗೆ ತಿಳಿದಿರಬೇಕು. ಹೀಗೆ ನಾನಾಕಡೆಯಿಂದ ಸಂಗ್ರಹಿಸಿದ ಅಂಶಗಳಿಂದ ನಮ್ಮ ಮೇಲೆ ಖಚಿತವಾದ ಆಪಾದನೆಗಳನ್ನು ಹೊರಿಸಿದ್ದಾನೆ."

ಗೋವಿಂದನಾಯಯರ್ ಅರಚಿದರು "ಎಲ್ಲಾ ಸುಳ್ಳಿನ ಕಂತೆ"

"ಅಸಂಬದ್ಧ ಪ್ರಲಾಪ....ಅಮಾನುಷ ರಾಕ್ಷಸೀ ಕೃತ್ಯ," ಎಂದಳು ಆಶಾ ಆವೇಗಪೂರಿತ ಧ್ವನಿಯಿಂದ.

"ಖಂಡಿತ ಇಲ್ಲ....ನಾವಿಬ್ಬರೂ ನಿರಪರಾಧಿಗಳು." ಎಂದ ಶಿವರಾಮು.

ಆನಂದ "ಇವರ ಉದ್ದೇಶ್ಯವೇ ಅರ್ಥವಾಗುತ್ತಿಲ್ಲ." ಎಂದ.

ಹಿಂದಿನ ಘಟನೆಗಳನ್ನು ನೆನಪಿಗೆ ತಂದುಕೊಳ್ಳುತ್ತಾ ಧರ್ಮಸಿಂಗ್ ನಿಧಾನವಾಗಿ ಹೇಳತೊಡಗಿದರು: "ನಿರಪರಾಧಿಯೊಬ್ಬನಿಗೆ ಮರಣದಂಡನೆ ವಿಧಿಸಿದ ಆಪಾದನೆಯನ್ನು ನನ್ನ ಮೇಲೆ ಹೊರಿಸಲಾಗಿದೆ. ಅದರ ಬಗ್ಗೆ ನನಗೆ ನೆನಪಿರುವಷ್ಟು ಹೇಳಿಬಿಡುತ್ತೇನೆ. ರಘುವೀರನ ಕೇಸು ನಾನು

ಪೂರ್ತಿ ಮರೆತಿಲ್ಲ. ಮುದುಕಿಯೊಬ್ಬಳ ಕೊಲೆಯ ಸಂಬಂಧದಲ್ಲಿ ಅವನು ವಿಚಾರಣೆಗೆ ಗುರಿಯಾಗಿದ್ದ. ಅವನ ಪರ ವಾದಿಸಿದ ಲಾಯರ್ ಜ್ಯೂರಿಯ ಮೇಲೆ ಒಳ್ಳೆಯ ಪ್ರಭಾವ ಬೀರಿದ್ದ. ಆದರೆ ಪ್ರಾಸಿಕ್ಯೂಷನ್ ಸಾಕ್ಷಿಗಳಿಂದ ಅವನು ಅಪರಾಧಿಯೆಂಬುದು ಖಚಿತವಾಯಿತು. ಜ್ಯೂರಿಗಳೂ ಅವನು ತಪ್ಪಿತಸ್ಥನೆಂದೇ ತೀರ್ಪಿತ್ತರು. ಸರಿ, ಅವನಿಗೆ ಮರಣದಂಡನೆ ವಿಧಿಸಬೇಕಾಯಿತು....ನಾನು ನನ್ನ ಕರ್ತವ್ಯವನ್ನು ಪಾಲಿಸಿದೆ"

ಗೋವಿಂದನಾಯರಿಗೂ ಆ ಕೇಸು ನೆನಪಿತ್ತು. ಖಂಡಿತವಾಗಿ ಅದು ಪ್ರಾಸಿಕ್ಯೂಷನ್ನಿಗೆ ವಿರೋಧವಾಗುತ್ತದೆ, ರಘುವೀರನಿಗೆ ಬಿಡುಗಡೆ ಖಂಡಿತವೆಂದು ಎಲ್ಲರ ಅಭಿಪ್ರಾಯವಾಗಿತ್ತು. ಆದರೆ ಧರ್ಮಸಿಂಗರವರು ರಘುವೀರನ ಮೇಲಿನ ವೈಯುಕ್ತಿಕ ದ್ವೇಷದಿಂದ ಜ್ಯೂರಿಯನ್ನು ತಮ್ಮ ಕಡೆಗೆ ಒಲಿಸಿಕೊಂಡು ಮರಣದಂಡನೆ ವಿಧಿಸಿದರೆಂದು ವದಂತಿ ಹಬ್ಬಿತ್ತು. ಅವರು ಹೇಳುತ್ತಿರುವುದೆಲ್ಲಾ ಸುಳ್ಳು ಎಂದುಕೊಂಡು ನಾಯರ್ ಪ್ರಶ್ನೆ ಹಾಕಿದರು. "ಕೇಸಿಗಿಂತ ಮೊದಲು ನಿಮಗೆ ರಘುವೀರನ ಪರಿಚಯವಿತ್ತೇ ?"

"ಇಲ್ಲ,....ಕೋರ್ಟಿನಲ್ಲೇ ಅವನನ್ನು ನಾನು ಮೊದಲು ನೋಡಿದ್ದು" ನಾಯರ್ ಏನೂ ಹೇಳದೆ ಮೆಲ್ಲನೆ ನಕ್ಕರು.

* * * *

ಆಶಾ ನಡುಗುವ ಧ್ವನಿಯಲ್ಲಿ ಹೇಳತೊಡಗಿದಳು: "ಶಿವನಾಥನ ಆಕಸ್ಮಿಕ ಮರಣದ ವಿಷಯವಿಷ್ಟು. ನಾನು ಶಿಶುವಿಹಾರದಲ್ಲಿದ್ದಾಗ ಶಿವನಾಥನ ತಂದೆತಾಯಿಗಳು ನನ್ನನ್ನು ಅವನ ವಿಶೇಷ ರಕ್ಷಣೆಗಾಗಿ ನೇಮಿಸಿಕೊಂಡಿದ್ದರು. ಅವನಿಗೆ ಆಗಿನ್ನೂ ಏಳೆಂಟು ವರ್ಷಗಳಿರಬಹುದು. ಒಂದು ದಿನ ನಗರದ ಈಜು ಕೊಳವೊಂದರಲ್ಲಿ ತನಗೆ ಸರಿಯಾಗಿ ಈಜಲು ಬರದಿದ್ದರೂ ನನ್ನ ಕಣ್ಣುತಪ್ಪಿಸಿ ಈಜಲು ಹೋದ. ನಾನು ನೋಡುವ ಹೊತ್ತಿಗೆ ಅವನು ನಡುನೀರಿನಲ್ಲಿದ್ದ. ಅವನನ್ನು ಉಳಿಸಲು ಮಾಡಿದ ಪ್ರಯತ್ನವೆಲ್ಲಾ ವಿಫಲವಾಯಿತು. ಅವನ ತಂದೆತಾಯಿಗಳ ಚಿಂತೆ ದಿನೇ ದಿನೇ ಹೆಚ್ಚಾಯಿತು. ಆದರೂ ಅವರು ನನ್ನ ಮೇಲೆ ತಪ್ಪು ಹೊರಿಸಲಿಲ್ಲ. ಕಾರಣ ನನ್ನ ತಪ್ಪೇನೂ ಇರಲಿಲ್ಲ. ಆ ಪ್ರಸಂಗವಾದ ಮೇಲೆ ನಾನು ಶಿಶುವಿಹಾರವನ್ನು ಬಿಟ್ಟುಬಿಟ್ಟೆ"

ಎಂದು ಗಳಗಳನೆ ಅಳಲಾರಂಭಿಸಿದಳು. ಗೋವಿಂದನಾಯರ್ ಅವಳನ್ನು ಸಮಾಧಾನಪಡಿಸಿದರು.

ನಂತರ ಅವರೇ ತಮ್ಮ ಪ್ರತಿವಾದವನ್ನು ಆರಂಭಿಸಿದರು. ಅವರ ಧ್ವನಿ ದೃಢವಾಗಿತ್ತು: "ಕೃಷ್ಣಚಂದ್ ನನ್ನ ಕೈಕೆಳಗಿನ ಅಧಿಕಾರಿಗಳಲ್ಲೊಬ್ಬ. ನಮ್ಮ ಶತ್ರುಗಳ ಕ್ಯಾಂಪನ್ನು ಮುತ್ತಿಗೆ ಹಾಕಲು ಸೈನ್ಯ ಸಮೇತ ಅವನನ್ನು ಕಳುಹಿಸಿದ್ದೆ. ಆ ಘರ್ಷಣೆಯಲ್ಲಿ ಅವನು ಪ್ರಾಣವನ್ನು ಅರ್ಪಿಸಿದ. ನನ್ನ ನೆಚ್ಚಿನ ಸ್ನೇಹಿತನವನು. ದೇಶಕ್ಕಾಗಿ ತ್ಯಾಗ ಮಾಡಿದ ವೀರ. ನನ್ನ ಪತ್ನಿಯ ಚರಿತ್ರೆ ಕಳಂಕರಹಿತವಾದದ್ದು. ಸಾವಿತ್ರಿಯಂತೆ ಅವಳು ಪತಿವ್ರತೆ...... ಕಥೆ ಕೇವಲ ಕುಹಕ." ಎಂದು ಆಪಾದನೆಗೆ ಉತ್ತರವನ್ನು ಮುಗಿಸಿದರು. ಅವರ ಮುಖದಲ್ಲಿ ಕೋಪದ ಬಿರುಸು ಸ್ಪಷ್ಟವಾಗಿತ್ತು. ಆ ಸಮಯದಲ್ಲಿ ಮಾಧವಸಾಹೇಬರು ಎದುರಿಗೆ ಬಂದಿದ್ದರೆ ಏನು ಮಾಡುತ್ತಿದ್ದರೋ.

ತಮ್ಮ ಸರದಿಯೂ ಬಂದೇ ಬರುತ್ತದೆ ಎಂದು ಎಲ್ಲರಿಗೂ ಗೊತ್ತಿತ್ತು. ಅಜಯಕುಮಾರ ತನ್ನ ಕತೆಯನ್ನು ಪ್ರಾರಂಭಿಸಿದ. "ಆ ಅಸ್ಸಾಂ ನಾಗಾ ಗುಂಪಿನ ಕತೆಯೇನೋ ನಿಜ ಆದರೆ ಅದರಲ್ಲಿ ನಮ್ಮದೇನೂ ತಪ್ಪಿರಲಿಲ್ಲ. ಕಾಡಿನ ಸಂಶೋಧನೆಗಾಗಿ ನಾವು ಮೂರು ನಾಲ್ಕು ಜನ, ಹತ್ತಾರು ನಾಗಾ ಜನರೊಡನೆ ಹೊರಟೆವು. ಮಧ್ಯೆ ನಮಗೆ ಆ ದಟ್ಟವಾದ ಕಾಡಿನಲ್ಲಿ ದಾರಿ ತಪ್ಪಿಹೋಯ್ತು. ನಮ್ಮ ಬಳಿಯಿದ್ದ ಆಹಾರ ಮುಗಿಯುತ್ತಾ ಬಂದಿತ್ತು. ಪ್ರಾಣರಕ್ಷಣೆಗಾಗಿ ಇದ್ದ ಬದ್ದ ಆಹಾರವನ್ನೆಲ್ಲಾ ಕೂಡಿಸಿಕೊಂಡು ಅವರನ್ನು ಅಲ್ಲಿಯೇ ಬಿಟ್ಟು ಹೊರಟುಬಿಟ್ಟೆವು. ಅವರು ಅಲ್ಲೇ ಸತ್ತರೆಂದು ವದಂತಿ ಹಬ್ಬಿತು. ಆದರೆ ಅದಕ್ಕೆ ಆಧಾರವೇನಿಲ್ಲ. ಸುಳ್ಳಿದ್ದರೂ ಇರಬಹುದು. ಅಥವಾ ಅವರು ಬೇರಾವ ಕಾರಣದಿಂದಲಾದರೂ ಸತ್ತಿರಬಹುದು.... ಆಗಿನ ನಮ್ಮ ವರ್ತನೆ ತಪ್ಪೇ ಆಗಿದ್ದರೂ ಅದು ನಾಲ್ಕು ಜನಕ್ಕೆ ಸೇರಿದ್ದು........."

ಹತ್ತಾರು ಜನರ ಸಾವಿಗೆ ಕಾರಣನಾಗಿ ತನ್ನ ತಪ್ಪು ಸ್ವಲ್ಪವೂ

ಇಲ್ಲವೆಂದು ವಾದಿಸುತ್ತಿರುವ ಅಜಯನನ್ನು ಕಂಡು ಆಶಾ ಒಳಗೇ ನಡುಗಿದಳು. 'ಇಂತಹ ನಿಷ್ಕರುಣಿಯೋ ಇವನು ?' ಎಂದುಕೊಂಡಳು.

ಶಿವರಾಮುನ ಮುಖ ಬಹಳ ಸಪ್ಪೆಯಾಗಿತ್ತು. ಅವನು ಬಹಳ ಹೆದರಿದ್ದ. ತನ್ನ ಚರಿತ್ರೆಯನ್ನು ಹೇಳಲು ಕಾತುರನಾಗಿದ್ದುದನ್ನು ಕಂಡು ಅಜಯ, "ಹ್ಞೂಂ ........ ಹೇಳು" ಎಂದ. ಶಿವರಾಮು ಗದ್ಗದ ಕಂಠದಿಂದ ಹೇಳಿದ: "ನಾವಿಬ್ಬರೂ ಕುಸುಮಾದೇವಿಯವರ ಹತ್ತಿರ ಹತ್ತುವರ್ಷಗಳ ಕಾಲ ಕೆಲಸ ಮಾಡಿಕೊಂಡಿದ್ದೆವು. ನಾವು ಕೆಲಸಕ್ಕೆ ಸೇರಿದಾಗಿನಿಂದಲೂ ಅವರ ಆರೋಗ್ಯ ಚೆನ್ನಾಗಿಯೇ ಇರಲಿಲ್ಲ. ಅವರ ಪತಿ ತೀರಿಹೋದ ಮೇಲೆ ಅದೇ ಕೊರಗಿನಿಂದ ಅವರ ಆರೋಗ್ಯ ಇನ್ನೂ ಕೆಟ್ಟಿತು. ಮರಣಕ್ಕೆ, ಬಹಳ ಕಾಲದ ಅವರ ಅನಾರೋಗ್ಯದ ಸ್ಥಿತಿ ಮತ್ತು ಪತಿವಿಯೋಗದ ಕೊರಗೇ ಕಾರಣವಾಯಿತು. ಒಂದು ರಾತ್ರಿ ಅವರ ಸ್ಥಿತಿ ತೀರಾ ಕೆಟ್ಟುಹೋಯಿತು. ಡಾಕ್ಟರನ್ನು ಕರೆದುಕೊಂಡು ಬರುವ ಹೊತ್ತಿಗೆ ಕೈಮೀರಿ ಹೋಗಿತ್ತು. ದೇವತೆಯಂತ ಹೆಂಗಸು. ನಮ್ಮನ್ನು ಮನೆಯವರಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದರು". ಕ್ಷಣಕಾಲ ತಡೆದು, "ಈ ರೀತಿ ಸುಳ್ಳು ಆಪಾದನೆ ಹೊರಿಸುವುದರ ಉದ್ದೇಶ್ಯ ನನಗೆ ಅರ್ಥವಾಗುತ್ತಿಲ್ಲ. ಜನಕ್ಕೆ ಸ್ವಲ್ಪವೂ ಸಹನೆ ಇಲ್ಲ" ಎಂದು ಮುಗಿಸಿದ. ಅವನ ಗಂಟಲು ಒಣಗುತ್ತಾ ಬಂದಿತ್ತು. ಆ ರಾತ್ರಿ ಅನಿರೀಕ್ಷಿತ ಧ್ವನಿಯನ್ನು ಕೇಳಿ ಶಿವರಾಮು ಹಾಲಿನ ಟ್ರೇಯನ್ನು ಕೈಜಾರಿ ಬಿಟ್ಟದ್ದು ಅಜಯನಿಗೆ ಮತ್ತೆ ನೆನಪಾಯಿತು. 'ಅದಕ್ಕೆ ಭಯವೇ ಕಾರಣವಿರಬೇಕು. ಅಂದರೆ, ಆಪಾದನೆ ನಿಜವಿರಬೇಕು. ಇವನು ಬಿಡುತ್ತಿರುವುದೆಲ್ಲಾ ಬುರುಡೆ' ಎಂದು ಅವನು ಯೋಚಿಸಿದ.

"ಅವರು ತೀರಿಹೋದ ಮೇಲೆ ಅವರ ಆಸ್ತಿಯಲ್ಲಿ ನಿಮಗೇನಾದರೂ ಅಲ್ಪ ಸ್ವಲ್ಪ ಸಿಕ್ಕಿತೇ?" ಎಂದು ಅನಿರೀಕ್ಷಿತ ಪ್ರಶ್ನೆ ಹಾಕಿದರು ಧರ್ಮಸಿಂಗ್. ಪ್ರಶ್ನೆಯಿಂದ ಶಿವರಾಮು ಮೂಕನಾದರೂ ದೃಢವಾಗಿ ಹೇಳಿದ:

"ನಾನು ಹೇಳಿದಂತೆ ಅವರು ನಮ್ಮನ್ನು ಮನೆಯವರಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ನಾವು ಮಾಡಿದ ಸೇವೆಗಾಗಿ ನಮಗೂ ಎರಡು ಸಾವಿರ

ರೂಪಾಯಿಗಳನ್ನು ಕೊಡುವಂತೆ ತಮ್ಮ 'ವಿಲ್ಲಿ' ನಲ್ಲಿ ಸೂಚಿಸಿದ್ದರು.... ಏಕಾಗಬಾರದು ? ಲಕ್ಷ್ಮಿಯಂತಹ ತಾಯಿ ಅವರು. ದಾನಕ್ಕೆ ಎತ್ತಿದಕೈ."

ಅಜಯ ಕಿಷನ್‌ಚಂದನ ಕಡೆಗೆ ತಿರುಗಿ, 'ನಿನ್ನ ಕಥೆ ಏನು ?' ಎಂದ. ಕಿರ್ಷ ನಗುತ್ತಲೇ ಆರಂಭಿಸಿದ, "ಸರಿ, ಸರಿ, ಹರಿಹರನಾಥನ ಕಥೆಯೋ? ಬ್ಯಾಂಕ್ ದರೋಡೆ ಸಂಬಂಧದಲ್ಲಿ ಅವನು ಸಿಕ್ಕಿಬಿದ್ದ. ಬ್ಯಾಂಕಿನ ಕಾವಲು ಗಾರನನ್ನು ಕೊಂದು ದರೋಡೆಗೆ ಸಹಕಾರಿಯಾಗಿದ್ದ. ಅವನಿಗೆ ಜೀವಾವಧಿ ಶಿಕ್ಷೆಯಾಯಿತು. ಕೆಲವು ವರ್ಷಗಳ ಮೇಲೆ ಅವನು ಜೈಲಿನಲ್ಲೇ ಸತ್ತು ಹೋದ."

"ಆ ಕೇಸಿಗೂ ನಿಮಗೂ ಏನು ಸಂಬಂಧ ?" ಎಂದರು ಗೋವಿಂದ ನಾಯರ್.

"ನಾನೇ ಅದನ್ನು ಪತ್ತೆ ಮಾಡಿ ಅವನನ್ನು ಪೋಲಿಸಿಗೆ ಹಿಡಿದು ಕೊಟ್ಟವನು."ಎಂದು ಮುಗಿಸಿ, ಆನಂದನ ಕಡೆಗೆ ತಿರುಗಿ ಅರ್ಥಪೂರ್ಣವಾಗಿ ನಕ್ಕ.

ಆನಂದ ಬಹಳ ಯೋಚಿಸಿ, "ನನಗೆ ಎಷ್ಟು ನೆನೆಸಿಕೊಂಡರೂ ನೆನ ಪಿಗೇ ಬರುತ್ತಿಲ್ಲ....ವಿಮಲಾದೇವಿ ! ಯಾರು ?....ಆ ಹೆಸರಿನ ರೋಗಿ ನನ್ನ ಬಳಿಗೇ ಬಂದ ನೆನಪಿಲ್ಲ......"

"ಬಂದಿದ್ದರೂ ಎಲ್ಲರ ಹೆಸರನ್ನು ನೆನಪಿನಲ್ಲಿಡಲು ಸಾಧ್ಯವೇ ?" ಎಂದ ಅಜಯು, ವ್ಯಂಗ್ಯವಾಗಿ.

"ಇಲ್ಲ,....ನನಗಂತೂ ಆಪಾದನೆ ಆಶ್ಚರ್ಯಕರವಾಗಿದೆ. ನನ್ನ ಮೇಲಿನ ವೈಯುಕ್ತಿಕ ದ್ವೇಷದಿಂದ ಮಾಡಿರುವ ಸೇಡಿದು....ಒಂದು ವೇಳೆ ನಾನು ನಡೆಸಿದ ಆಪರೇರ್ಷ ಸಫಲವಾಗದೆ ಸತ್ತಿದ್ದರೂ ಇರಬಹುದು. ಆ ಜವಾಬ್ದಾರಿ ನಮ್ಮದಲ್ಲ. ನಮ್ಮ ಜನಕ್ಕೆ ಬುದ್ಧಿ ಇಲ್ಲ, ಖಾಯಿಲೆ ಮಿತಿಮೀರಿದ ಮೇಲೆ ಚಿಕಿತ್ಸೆಗೆ ಬರುತ್ತಾರೆ. ಗುಣವಾಗದಿದ್ದರೆ ಡಾಕ್ಟರ ಮೇಲೆ ತಪ್ಪು ಹೊರಿಸು ತ್ತಾರೆ"

ಹಿಂದಿನ ಘಟನೆಯೊಂದು ಅವನ ನೆನಪಿಗೆ ಬಂತು. ಒಂದು ಆಪ ರೇರ್ಷ ಕೇಸು. ಅಂದು ಅವನು ಸ್ವಲ್ಪ ಕುಡಿದು ಬಂದಿದ್ದ. ಅದು ಅವನ

ತಪ್ಪು....ಕೈಗಳು ನಡುಗುತ್ತಿದ್ದವು. ಸ್ವಲ್ಪ ಎಚ್ಚರಿಕೆ ವಹಿಸಿದ್ದರೆ ಆಪರೇಷನ್ ಫಲಕಾರಿಯಾಗುತ್ತಿತ್ತು.....ಉದ್ಯೋಗದ ಗೌರವ ಅವನನ್ನು ಕಾಪಾಡಿತ್ತು.

* * *

ಈಗ ಎಲ್ಲರ ದೃಷ್ಟಿ ಸುಧಾದೇವಿಯವರ ಕಡೆಗೆ ತಿರುಗಿತು. ಕಿಷನ್ ಚಂದ್ "ಎಲ್ಲರದೂ ಆಯಿತು. ಈಗ ನಿಮ್ಮ ಸರದಿ. ಕುಮಾರಿ ಚಂದ್ರಾರವರ ವಿಚಾರವೇನು ?" ಎಂದ

ಸುಧಾ ಕೋಪೋದ್ರಿಕ್ತ ಮುಖದಿಂದ ಅವನನ್ನು ನೋಡಿ "ಎಲ್ಲಾ ಸುಳ್ಳು. ನಾನು ಹೇಳುವುದು ಏನೂ ಇಲ್ಲ." ಎಂದು ಗುಡುಗಿದಳು.

"ಏನೂ ಇಲ್ಲವೇ ? ನಿದಾನವಾಗಿ ನೆನೆಸಿಕೊಳ್ಳಿ."

"ಇಲ್ಲ, ನೆನೆಸಿಕೊಳ್ಳುವ ಅವಶ್ಯಕತೆಯೇ ಇಲ್ಲ. ನನ್ನ ಇಡೀ ಜೀವನದಲ್ಲಿ ನಾನು ಯಾರ ಮನಸ್ಸನ್ನೂ ನೋಯಿಸಿಲ್ಲ. ನನ್ನ ನಿಷ್ಕಳಂಕ ಚರಿತ್ರೆ ನನಗೆ ಗೊತ್ತಿದೆ. ಹುಚ್ಚನೊಬ್ಬನ ಮಾತಿಗೆ ಪ್ರತಿಭಟಿಸಬೇಕಾಗಿಲ್ಲ."

ಸುತ್ತಲೂ ಅತೃಪ್ತಿಯ ವಾತಾವರಣ ಹರಡಿತು ಆದರೆ ಸುಧಾ ಮಾತ್ರ ಯಾವ ಹೇಳಿಕೆಯನ್ನೂ ಕೊಡಲು ನಿರಾಕರಿಸಿದಳು. ಅವಳು ಅಷ್ಟಾಗಿ ಹೆದರಿದಂತೆಯೂ ಕಂಡುಬರಲಿಲ್ಲ. ಅವಳನ್ನು ಮತ್ತೆ ಯಾರೂ ಒತ್ತಾಯ ಪಡಿಸಲಿಲ್ಲ.

ಧರ್ಮಸಿಂಗ್ ಬಾಯಿ ಹಾಕಿದರು. "ಸದ್ಯಕ್ಕೆ ನಮ್ಮ ವಿಚಾರಣೆ ಇಲ್ಲಿಗೆ ಮುಕ್ತಾಯವಾದಂತಾಯ್ತು. ಈಗ ನಾವು ಮುಂದೆ ಕೈಗೊಳ್ಳಬೇಕಾದ ಮಾರ್ಗವನ್ನು ಆಲೋಚಿಸಬೇಕು......ಶಿವರಾಮು, ನಾವಲ್ಲದೆ ಈ ದ್ವೀಪದಲ್ಲಿ ಇನ್ಯಾರಾರಿದ್ದಾರೆ ?"

"ಇಲ್ಲ, ಯಾರೂ ಇಲ್ಲ"

"ಅದರಲ್ಲಿ ಸಂದೇಹವಿಲ್ಲವೋ ?"

"ಇಲ್ಲ, ಬೇರೆ ಯಾರೂ ಇಲ್ಲ. ನಾವಿಷ್ಟೇ ಜನ."

"ನಮ್ಮನ್ನು ಈ ರೀತಿ ಒಟ್ಟಿಗೆ ಇಲ್ಲಿ ಸೇರಿಸಿ ಕುಚೇಷ್ಟೆ ಮಾಡುತ್ತಿರುವ ಉದ್ದೇಶ್ಯ ನಮಗೆ ಅರ್ಥವಾಗುತ್ತಿಲ್ಲ. ಅವನು ಯಾರೇ ಆಗಲಿ ಬುದ್ಧಿಗೆಟ್ಟ ನೀಚನಿರಬೇಕು........ನಾವು ಇಲ್ಲಿರುವುದು ಅಪಾಯಕಾರಿ.

ಆದ್ದರಿಂದ ಆದಷ್ಟು ಬೇಗ ........ ಇದೇ ರಾತ್ರಿ ಇಲ್ಲಿಂದ ಹೊರಟುಬಿಡ ಬೇಕು" ಎಂದರು ಧರ್ಮಸಿಂಗ್.

ಶಿವರಾಮು, "ಆದರೆ ದೋಣಿಯೇ ಇಲ್ಲವಲ್ಲ. ಶ್ಯಾಮುಲಾಲ್ ಆಗಲೇ ಹೊರಟುಹೋದ." ಎಂದ

"ಆ್ಞ ! ಏನೆಂದೆ ! ದೋಣಿ ಇಲ್ಲವೇ ?" ಎಂದು ಕಣ್ಣರಳಿಸಿದರು ಗೋವಿಂದನಾಯರ್.

"ಉಹ್ಞ, ಇಲ್ಲ, ಮತ್ತೆ ನಾಳೆ ಬೆಳಗ್ಗೆಯೇ ಅವನು ಬರುವುದು"

"ಸರಿ, ಹಾಗಾದರೆ ಬೆಳಗ್ಗೆ ಬೋಟು ಬಂದಕೂಡಲೇ ನಗರಕ್ಕೆ ಹಿಂದಿರುಗಬೇಕು" ಎಂದು ಸುತ್ತಲೂ ನೋಡಿದರು ಧರ್ಮಸಿಂಗ್.

ಎಲ್ಲರೂ ಒಪ್ಪಿಗೆಯ ತಲೆಯನ್ನಾಡಿಸಿದರು. ಆದರೆ ಒಪ್ಪದಿದ್ದ ವನು ಒಬ್ಬ ಮಾತ್ರ. ಅವನು ಕಿಷನ್‌ಚಂದ್.

"ಛೆ, ಹಾಗೆ ಹೊರಟುಹೋಗುವುದು ಹೇಡಿತನ. ಇಲ್ಲಿಯ ರಹಸ್ಯ ವನ್ನು ಭೇದಿಸದೆ ಹೊರಡುವುದು ಅಪಮಾನಕರ. ರೋಮಾಂಚಕಾರಿ ಯಾಗಿದೆ ಇಲ್ಲಿನ ಜೀವನ." ಎಂದ.

"ಇಂತಹ ಸಾಹಸಗಳು ನನಗೆಂದೂ ಹಿಡಿಸಿಲ್ಲ. ಇವುಗಳೆಲ್ಲಾ ಕತೆ ಕಾದಂಬರಿಗಳಲ್ಲಿ. ನಮ್ಮದು ಜೀವನ" ಎಂದರು ಧರ್ಮಸಿಂಗ್.

ಕಿಷನ್‌ಚಂದ್ ಪಕ್ಕದ ಮೇಜಿನ ಮೇಲಿದ್ದ ತನ್ನ ಗ್ಲಾಸಿಗೆ ವ್ಹಿಸ್ಕಿ ತುಂಬಿಕೊಂಡು ಎತ್ತಿ ಹಿಡಿದು, " ಈ ವ್ಹಿಸ್ಕಿ ಸಾಹಸ ಜೀವನದ ಮೊದಲ ಹೆಜ್ಜೆ" ಎನ್ನುತ್ತಾ ಒಂದೇ ಗುಟುಕಿಗೆ ಪೂರ್ತಿಯಾಗಿ ಕುಡಿದುಬಿಟ್ಟ......... ಒಂದು ಕ್ಷಣ .........ನಂತರ ಒಂದೆರಡು ಬಾರಿ ಕೆಮ್ಮಿದ.... ಮುಖ ವಿವರ್ಣ ವಾಯಿತು. ಕುರ್ಚಿಯಿಂದ ಕೆಳಗುರುಳಿದ.........ಗ್ಲಾಸು ಕೈಯಿಂದ ಜಾರಿ ನೆಲದಮೇಲೆ ಬಿದ್ದು ಹೊರಳಿತು.

೫

ಆ ಅನಿರೀಕ್ಷಿತ ಆಕಸ್ಮಿಕ ಘಟನೆಯನ್ನು ನೋಡಿ, ಎಲ್ಲರೂ ಸ್ತಬ್ಧ ರಾದರು. ಆನಂದ ಸರ್ರನೆ ನುಗ್ಗಿ ಕಿರ್ಷಚಂದನನ್ನು ಪರೀಕ್ಷಿಸಿದ. ಕಣ್ಣನ್ನರಳಿಸಿ ನೋಡಿ, ನಾಡಿ ಹಿಡಿದು ಪರೀಕ್ಷಿಸಿ ಕ್ಷಣಕಾಲ ತಡೆದು ಉಳಿದವರನ್ನು ಭಯಭ್ರಾಂತ ಕಣ್ಣುಗಳಿಂದ ನೋಡುತ್ತಾ "Oh God he is dead" ಎಂದ. ಎಲ್ಲರ ಮುಖ ವಿವರ್ಣವಾಯಿತು. ಯಾರೂ ಅವನ ಮಾತನ್ನು ಸುಲಭವಾಗಿ ನಂಬಲಿಲ್ಲ. ಕಿರ್ಷಚಂದ್‌ನಂತಹ ಯುವಕ, ದೃಢವಾದ ಉಕ್ಕಿನಂತಹ ಮೈಕಟ್ಟುಳ್ಳ ವ್ಯಕ್ತಿ ಎರಡು ಬಾರಿ ಕೆಮ್ಮಿ ಸತ್ತನೆಂದರೆ ನಂಬಲಸಾಧ್ಯವಾಗಿತ್ತು. 'ಸತ್ತನೇ ? ಛೆ, ಅಮಲೇರಿ ಜ್ಞಾನ ತಪ್ಪಿರಬಹುದು.........' ಎನಿಸಿತು ಅವರಿಗೆ.

ಗೋವಿಂದನಾಯರ್ ಎಂದರು, "ಪರೀಕ್ಷಿಸಿ, ಇನ್ನೂ ಒಂದು ಸಲ ಆನಂದ್, ಖಂಡಿತ ಪ್ರಾಣವಿಲ್ಲವೇ ?"

ಆನಂದ ಪುನಃ ಪರೀಕ್ಷಿಸಲಿಲ್ಲ. ಅವನು ಪ್ರತ್ಯುತ್ತರವನ್ನೂ ಕೊಡಲಿಲ್ಲ. ಅವನ ನೋಟವೇ ಹೇಳುತ್ತಿತ್ತು, ಅದರಲ್ಲಿ ಸಂದೇಹವಿಲ್ಲವೆಂದು, ಆಶಾ ನಡಗುತ್ತಿದ್ದಳು. ಅಜಯ ಸಂದೇಹದಿಂದ, "ಸುಮ್ಮನೆ ಕೆಮ್ಮಿ ಸತ್ತು ಹೋದನೇ" ಎಂದ.

"ಕಾರಣವೇನೇ ಇರಲಿ, ಅವನು ಸತ್ತಿರುವುದು ಸುಳ್ಳಲ್ಲ," ಎಂದ ಆನಂದ. ಕೂಡಲೇ ಅವನು ಕಿಸನ್‌ಚಂದ್ ಕುಡಿದ ಗ್ಲಾಸನ್ನು ಪರೀಕ್ಷಿಸಿದ. ತಳಭಾಗದಲ್ಲಿ ಸಕ್ಕರೆ ಪುಡಿಯಂತಿದ್ದ ಗಸ್ಟು ಉಳಿದಿತ್ತು. ಅದನ್ನು ಮೂಸಿ ನೋಡಿ ನಂತರ ವ್ಹಿಸ್ಕಿ ಸೀಸೆ, ಸೋಡಾಗಳನ್ನು ಪರೀಕ್ಷಿಸಿದ. ಯಾವುದರಲ್ಲಿಯೂ ದೋಷ ಕಂಡು ಬರಲಿಲ್ಲ.

"ಗ್ಲಾಸಿನಲ್ಲಿರುವುದು ಏನು ಆನಂದ್?" ಎಂದರು ಧರ್ಮಸಿಂಗ್

"ಅದರದ್ದೇ ಇರಬೇಕು ಕೆಲಸ......ಪರೀಕ್ಷೆ ಮಾಡದೆ ಏನೂ ಹೇಳುವಂತಿಲ್ಲ......ಸಯನೈಡ್ ವಿಷವಿರಬಹುದೆಂದು ನನ್ನ ಊಹೆ."

ಆಶಾ ಕೇಳಿದಳು; "ಹಾಗಾದರೆ ಅವನೇ ಅದನ್ನು ತನ್ನ ಗ್ಲಾಸಿಗೆ ಹಾಕಿ ಕೊಂಡನೆ ?"

"ಅವನಲ್ಲದೆ ಇನ್ಯಾರು ಹಾಕಿರಬೇಕು ?"

ಗೋವಿಂದನಾಯರ್ ಎಂದರು, "ಹಾಗಾದರೆ ಅದು ಆತ್ಮಹತ್ಯವೇ ? ಛೆ ! ಎಂದಿಗೂ ಇಲ್ಲ..........ಆತ್ಮಹತ್ಯೆ ಮಾಡಿಕೊಳ್ಳುವಂತಹ ಮನುಷ್ಯನೇ ಅವನಲ್ಲ" ಸುಧಾದೇವಿ, ಧರ್ಮಸಿಂಗ್‌ರೂ ಅವರ ವಾದವನ್ನೇ ಎತ್ತಿ ಹಿಡಿದರು.

"ಆತ್ಮಹತ್ಯವಲ್ಲವೆಂದು ನಿರ್ಧರಿಸಿದರೆ, ಅವನ ಮರಣಕ್ಕೆ ಕಾರಣ ವೇನು ?" ಅಜಯನ ಪ್ರಶ್ನೆ ಬಹಳ ಕಠಿಣವಾಗಿತ್ತು. ಯಾರಿಗೂ ಏನೂ ಹೊಳೆಯಲಿಲ್ಲ. ಅಂದು ಅವರು ತಿಂದ, ಕುಡಿದ ಪದಾರ್ಥಗಳೆಲ್ಲವನ್ನೂ ಪರೀಕ್ಷಿಸಿದರು. ಮದ್ಯದ ಸೀಸೆಗಳು, ಸೋಡಾ ಸೀಸೆಗಳು ಎಲ್ಲವೂ ಸೀಲ್ ಆಗಿದ್ದವು. ಉಳಿದವರೆಲ್ಲರೂ ಅದೇ ತಿಂಡಿ ತಿನಸುಗಳನ್ನು ತಿಂದಿದ್ದರು. ಅಡಿಗೆಯಲ್ಲಿ ಯಾವ ದೋಷವೂ ಇಲ್ಲವೆಂಬುದು ಸ್ಪಷ್ಟವಾಯ್ತು. ಅಂದ ಮೇಲೆ ದೋಷ ಅವನು ಕುಡಿದ ಗ್ಲಾಸಿನಲ್ಲೇ ಇರಬೇಕು. ಕಿಷನ್‌ಚಂದ್ ತಾನೇ ತನ್ನ ಗ್ಲಾಸಿಗೆ ವ್ಹಿಸ್ಕಿ ತುಂಬಿಕೊಂಡಿದ್ದ. ಅದೇ ಗ್ಲಾಸಿನಲ್ಲೇ ನಾಲ್ಕಾರು ಬಾರಿ ಕುಡಿದೂ ಇದ್ದ. ಹಾಗಾದರೆ ಸಯನ್ಯೆಡ್ ಎಲ್ಲಿಂದ ಬಂತು ?.........ಅವನೇ ಹಾಕಿಕೊಂಡನೇ ? ಅಂದರೆ ಆತ್ಮಹತ್ಯವೇ ?.... ಕಾರಣವೇನಿರಬಹುದು ? ಛೆ ! ಇದು ಸಾಧ್ಯವಿಲ್ಲ....ಹಾಗಾದರೆ ಮರಣಕ್ಕೆ ಕಾರಣ ? ಯಾರಿಗೂ ಉತ್ತರ ಹೇಳಲು ಸಾಧ್ಯವಾಗಲಿಲ್ಲ........ತಮ್ಮಲ್ಲಿ ಯಾರಾದರೂ ಈ ಆಕಸ್ಮಿಕ ಘಟನೆಗೆ ವಿವರಣೆ ಕೊಡಬಹುದೆಂದು ಒಬ್ಬರ ನ್ನೊಬ್ಬರು ನೋಡುತ್ತಿದ್ದರು. ಬಹಳ ಹೊತ್ತು ಎಲ್ಲರೂ ಮೂಕರಾಗಿದ್ದರು.

ಆಶಾ, "ನಾವು ಈಗಲೇ ಪೋಲಿಸ್‌ಗೆ ಕಂಪ್ಲೈಂಟು ಕೊಡಬೇಕು" .... ಎಂದಳು. ಧರ್ಮಸಿಂಗ್ "ಅದೇ ಸರಿ....ಈಗಲೇ ಟೆಲಿಫೋನ್ ಮಾಡ ಬೇಕು" ಎನ್ನುತ್ತಾ ಮೇಲೆದ್ದು, ಶಿವರಾಮನ ಕಡೆಗೆ ತಿರುಗಿ, "ಟೆಲಿ ಫೋನ್ ಎಲ್ಲಿದೆ ?"ಎಂದರು. ಶಿವರಾಮು "ಇಲ್ಲ ಇಲ್ಲ. ಎಲ್ಲೂ ಇರುವಂತಿಲ್ಲ" ಎಂದ.

"ಆ್ಞ ! ಇಲ್ಲವೇ ? ಏಕೆ ?" ಎಂದು ಚಕಿತರಾದರು ಗೋವಿಂದ ನಾಯರ್, 'ಇಷ್ಟು ದೊಡ್ಡ ಶ್ರೀಮಂತ ಭವನದಲ್ಲಿ ಫೋನಿಲ್ಲವೆಂದರೆ ಎಷ್ಟು ಹಾಸ್ಯಾಸ್ಪದ ಎನಿಸಿತು' ಆಶಾಳಿಗೆ. ಎಲ್ಲಾ ಆಧುನಿಕ ಸೌಲಭ್ಯವಿರುವ

ಭವನದಲ್ಲಿ ಫೋನ್ ಇಲ್ಲದಿರುವುದು ಸಂದೇಹಾಸ್ಪದವಾಗಿ ತೋರಿತು, ಅಜಯನಿಗೆ. 'ಆದರೆ ಭವನ ಸಮುದ್ರದ ಮಧ್ಯೆ ದ್ವೀಪದಲ್ಲಿದ್ದುದರಿಂದ ಆ ಸೌಲಭ್ಯ ಇದ್ದಿರಲಾರದು' ಎಂದುಕೊಂಡಳು ಸುಧಾದೇವಿ.

*   ÷   *   *

ಗಂಟೆ ಹನ್ನೆರಡಾಯಿತು. 'ಏನು ಮಾಡಬೇಕು ?' ಎಂಬುದೇ ಎಲ್ಲರ ಪ್ರಶ್ನೆಯಾಗಿತ್ತು. ಮೊದಲು ಬಾಯಿಬಿಟ್ಟು ಕೇಳಿದವಳು ಆಶಾ: "ಮಾಡುವುದೇನು ?"

"ಆತ್ಮಹತ್ಯೆ ಮಾಡಿಕೊಂಡಿರುವವನನ್ನು ಏನು ಮಾಡಲು ತಾನೇ ಸಾಧ್ಯ ?" ಎಂದ ಆನಂದ. ತಕ್ಷಣ ಕೇಳಿದ ಅಜಯ,

"ಆತ್ಮಹತ್ಯೆ ಎಂದು ಹೇಗೆ ತಾನೇ ಹೇಳುತ್ತೀರಿ ?"

"ಬೇರೆ ಇನ್ನಾವ ಕಾರಣವನ್ನೂ ಕಂಡುಹಿಡಿಯಲು ಅಸಾಧ್ಯವಾದ ಮೇಲೆ ಆತ್ಮಹತ್ಯೆ ಎಂದು ತಾನೇ ಊಹಿಸಬೇಕು?"

"ಸರಿ, ಸರಿ" ಎಂದು ಸುಮ್ಮನಾದ ಅಜಯ. ಅವನೂ ಆನಂದ ಸೇರಿ ಕಿಷನ್‌ಚಂದನ ದೇಹವನ್ನು ಅವನ ರೂಮಿಗೆ ಸಾಗಿಸಿ ವಾಪಸ್ಸಾದರು. ಸುಧಾ ಎಂದಳು. "ಆಗಲೇ ಹನ್ನೆರಡಾಯ್ತು. ಇನ್ನು ಮಲಗಬೇಕು." ಯಾರಿಗೂ ನಿದ್ದೆ ಬಾರದು. ಆದರೂ ಅವರು ಬೇರೇನೂ ಮಾಡುವಂತಿರಲಿಲ್ಲ. ಎಲ್ಲರೂ ಒಟ್ಟಿಗೆ ಇದ್ದರೆ ವಾಸಿ ಅನ್ನಿಸುತ್ತಿತ್ತು ಅವರಿಗೆ. ಗೋವಿಂದರ್ ಎಂದರು "ಹೌದು.... ಈಗ ನಿದ್ರೆಯ ಅವಶ್ಯಕತೆಯಿದೆ ..". ಆನಂದ ಶಿವರಾಮನ ಕಡೆಗೆ ತಿರುಗಿ "ನಿನ್ನ ಹೆಂಡತಿ ಹೇಗಿದ್ದಾಳೆ ?" ಎಂದ. ಶಿವರಾಮು "ನೋಡಿಕೊಂಡು ಬರುತ್ತೇನೆ" ಎಂದು ಹೇಳಿ ಹೋದ. ಸ್ವಲ್ಪ ಹೊತ್ತಾದ ಮೇಲೆ ಬಂದು "ಒಳ್ಳೆಯ ನಿದ್ರೆಹತ್ತಿದೆ ಅವಳಿಗೆ" ಎಂದ. ಎಲ್ಲರೂ ಮಹಡಿ ಹತ್ತತೊಡಗಿದರು. ಶಿವರಾಮು ಉಳಿದ ಚಿಲ್ಲರೆ ಕೆಲಸಗಳನ್ನು ಮಾಡಲು ಹೊರಟ.

ಎಲ್ಲರೂ ತಮ್ಮ ತಮ್ಮ ಕೋಣೆಗೆ ಪ್ರವೇಶಿಸಿದರು. ಒಳಗೆ ಹೋಗುತ್ತಲೇ ಬಾಗಿಲುಗಳನ್ನು ಭದ್ರಪಡಿಸಿಕೊಂಡರು ಎಂದು ಹೇಳಬೇಕಾಗಿಲ್ಲ.

*   *   *   *

ಧರ್ಮಸಿಂಗ್ ಬಟ್ಟೆಗಳನ್ನು ಬದಲಾಯಿಸಿ ಮಲಗಲು ಸಿದ್ಧರಾದರು. ಆದರೆ ನಿದ್ದೆ ಬರುವಂತಿರಲಿಲ್ಲ. ಕೈಗಡಿಯಾರ, ಕನ್ನಡಕಗಳನ್ನು ತೆಗೆದಿರಿಸಿ ಹಾಸಿಗೆಯ ಮೇಲೆ ಪವಡಿಸಿದರು. ಸಿಗಾರೊಂದನ್ನು ಹಚ್ಚಿ, ಬಾಯೊಳಗೆ ಬಂದ ಹೊಗೆಯನ್ನು ನಿದಾನವಾಗಿ ಹೊರಗೆ ಬಿಡತೊಡಗಿದರು. ಹೊಗೆಯ ಸುರಳಿಗಳಂತೆ ಅವರಿಗೆ ತಮ್ಮ ಹಿಂದಿನ ಜೀವನದ ನೆನಪುಗಳು, ಅಲೆಯಲೆ ಯಂತೆ ಬರಲಾರಂಭಿಸಿದವು. ರಘುವೀರನ ಕೇಸಿನ ನೆನಪು ಎಲ್ಲದಕ್ಕಿಂತ ಸ್ಪಷ್ಟವಾಗಿ, ಉಳಿದೆಲ್ಲವನ್ನು ಹಿಂದಕ್ಕೆ ದೂಡಿ ಅವರ ಮನೋವೇದಿಕೆಯ ಮೇಲೆ ಮೂಡಿತು. ರಘುವೀರ ಬಹಳ ಸುಂದರನಾದವ್ಯಕ್ತಿ. ದೃಢವಾದ ಮೈ ಕಟ್ಟು. ಆಗ ಅವನ ವಯಸ್ಸು ಇಪ್ಪತ್ತಾರು. ವಿಚಾರಣೆ ಕಾಲದಲ್ಲಿ ಅವನು ಹೆಚ್ಚು ಹೆದರಿದಂತೆ ಕಾಣುತ್ತಿರಲಿಲ್ಲ. ಅವನು ಕೊಲೆಗಡುಕನೆಂದು ಯಾರೂ ಹೇಳುವಂತಿರಲಿಲ್ಲ. ಅವನ ಲಾಯರ್ ಜಯನಾರಾಯಣ ಪ್ರಸಾದ್ ಒಳ್ಳೆಯ ಪ್ರಚಂಡ. ಅವನ ವಾದದಲ್ಲಿ ಬಲವಿತ್ತು. ಅವನ ಸಾಕ್ಷಿಗಳು ಚೆನ್ನಾಗಿ ಉತ್ತರ ಕೊಡುತ್ತಿದ್ದರು. ಅವನ ಕ್ರಾಸ್ ಎಕ್ಸಾಮಿನೇಷನ್ ಪ್ರಾಸಿಕ್ಯೂಷನ್ ಸಾಕ್ಷಿಗಳಿಗೆ ತಲೆನೋವು ತರುತ್ತಿತ್ತು. ಆದರೆ ಪ್ರಾಸಿ ಕ್ಯೂಟರ್ ಬದರೀನಾಥ್ ಕೂಡಾ ಅವನಿಗೆ ಸರಿಸಾಟಿಯಾದ ವ್ಯಕ್ತಿ....ಈ ಇಬ್ಬರ ವಾಕ್‌ಚಾತುರ್ಯಗಳ ಮಧ್ಯೆ ಜ್ಯೂರಿಗಳಿಗೆ ತೀರ್ಪು ಕೊಡಲು ಬಹಳ ಕಷ್ಟವಾಗಿತ್ತು....ಅವರು ತಮ್ಮ ಬುದ್ಧಿಯನ್ನೆಲ್ಲಾ ಉಪಯೋಗಿಸಿ, ಬಹಳ ಹೊತ್ತು ಪರ್ಯಾಲೋಚಿಸಿ ತಮ್ಮ ನಿರ್ಧಾರವನ್ನು ಸೂಚಿಸಿದ್ದರು.... ಆಮೇಲೆ ತಮ್ಮ ತೀರ್ಪು....ಅದು ಕ್ರೂರವಾಗಿತ್ತು, ಆದರೆ ಬೇರೆ ವಿಧಿಯಿರ ಲಿಲ್ಲ. ರಘುವೀರನ ಅಪರಾಧ ಖಚಿತವಾಗಿತ್ತು. ಆದ್ದರಿಂದ ಅವನಿಗೆ ಮರಣದಂಡನೆ ವಿಧಿಸಬೇಕಾಯಿತು. ಹೀಗೆ ಎಷ್ಟೋ ಜನರಿಗೆ ನಾನಾ ರೀತಿಯ ಶಿಕ್ಷೆಗಳನ್ನು ತಾವು ವಿಧಿಸಿರಲಿಲ್ಲವೇ ? ...ನ್ಯಾಯಾಧೀಶರ ಕಾರ್ಯ ಹಿಂಸಾತ್ಮಕ, ಆದರೆ ಅದು ಆ ಸ್ಥಾನದ ಕರ್ತವ್ಯ ... ಹಾಗೇ ಅವರಿಗೆ ನಿದ್ರೆ ಹತ್ತತೊಡಗಿತು.

* * * *

ಗೋವಿಂದನಾಯರ್ ಹಾಸಿಗೆಯ ಮೇಲೆ ಹೊರಳಾಡುತ್ತಿ

ದ್ದರು. ಅವರಿಗೆ ನಿದ್ರೆ ಬರುವಂತಿರಲಿಲ್ಲ. ಕೃಷ್ಣಚಂದನ ಚಿತ್ರ ಅವರ ಕಣ್ಣಿಗೆ ಕಟ್ಟಿದಂತಿತ್ತು. ಅವನೊಡನೆ ತಾವು ಸ್ನೇಹ ಬೆಳೆಸಿದ ರೀತಿ..........ಆಗಾಗ್ಗೆ ಬಂದು ಹೋಗುತ್ತಿದ್ದ ಅವನು, ಬಹಳ ಪ್ರಿಯನಾದ ಸ್ನೇಹಿತನಾಗಿದ್ದ. ಕೆಲವು ದಿನಗಳಲ್ಲಿಯೇ ತಮ್ಮ ಪತ್ನಿಗೂ ಮಕ್ಕಳಿಗೂ ಅವನೊಡನೆ ವಿಶ್ವಾಸ ಬೆಳೆದಿತ್ತು. ತಮ್ಮ ಪತ್ನಿ ಕುಮುದಂ ಅವನನ್ನು ಯಾವಾಗಲೂ ಹೊಗಳುತ್ತಿದ್ದಳು ....ಅವನು ಮನೆಗೆ ಬಂದರೆ ಅವಳ ಉತ್ಸಾಹ ಮಿತಿಮೀರುತ್ತಿತ್ತು....ಬರುಬರುತ್ತಾ ಕುಮುದಳ ವರ್ತನೆ ಬಗ್ಗೆ ಅವರಿಗೆ ಅನುಮಾನ ಪ್ರಾರಂಭವಾಯಿತು.......ಒಂದು ಸಾರಿ ಗುಟ್ಟು ಹೊರಬಿತ್ತು. ಕೃಷ್ಣಚಂದ್ ಅವರ ಪತ್ನಿಗೆ ಬರೆದ ಕಾಗದ ಆಕಸ್ಮಾತ್ ಅವರ ಕೈ ಸೇರಿತು.....ಮತ್ಸರದ ಕಿಡಿ ಹೊಗೆಯಾಡಲಾರಂಭಿಸಿತು. ಒಂದು ದಿನ ನಿರ್ಧರಿಸಿದರು.—ಈ ಸಂಬಂಧ ಮುರಿಯಬೇಕಾದರೆ ಇಬ್ಬರಲ್ಲಿ ಒಬ್ಬರ ಕೊನೆಯಾಗಬೇಕೆಂದು. ಆದರೆ ಕುಮುದ ಪ್ರೀತಿಯ ಮಡದಿ........ಸರಿ, ಕೃಷ್ಣಚಂದ್‌ನನ್ನೇ ಕೊನೆಗಾಣಿಸಬೇಕೆಂದೂ ನಿರ್ಧರಿಸಿದರು. ಯುದ್ಧ ಕಾಲ ಒದಗಿಬಂದಿತ್ತು. ಕರ್ತವ್ಯದ ಹೆಸರಿನಲ್ಲಿ ಸುಲಭವಾಗಿ ಕೊಲೆಮಾಡಲು ಸದವಕಾಶ....ತಮಗೆ ದೊರೆತ ಮೊದಲವಕಾಶದಲ್ಲೇ ಕೃಷ್ಣಚಂದ್‌ನನ್ನು ಕೊನೆಗಾಣಿಸಿದ್ದರು. ಅದು ತಮ್ಮ ಅಪರಾಧವೆಂದು ಅವರು ಬಗೆಯಲಿಲ್ಲ. 'ಪತ್ನಿಯನ್ನು ತನ್ನ ಬುಟ್ಟಿಗೆ ಹಾಕಿಕೊಂಡವನನ್ನು ಕೊಲೆ ಮಾಡುವುದು ಪಾಪವೇ? ಎಂದಿಗೂ ಇಲ್ಲ' ಎಂದಿತು ಅವರ ಮನಸ್ಸು. ಅಂತೆಯೇ ಮಾಡಿದರು. ಇಪ್ಪತ್ತು ವರ್ಷಗಳ ಹಿಂದಿನ ಮಾತದು. ಆದರೂ ಅದನ್ನು ಮರೆಯಲು ಸಾಧ್ಯವಾಗಲಿಲ್ಲ. ಜನರು ನಾನಾರೀತಿಯಲ್ಲಿ ಆಡಿಕೊಳ್ಳುತ್ತಿದ್ದರು. ಮತ್ತೆ ಅದೇ ಅಪರಾಧವನ್ನು ಈಗ ಯಾವುದೋ ಅಪರಿಚಿತ ವ್ಯಕ್ತಿ ಹೊರಿಸಿದ್ದಾನೆ........ಈ ಗುಟ್ಟು ಅವನಿಗೆ ಹೇಗೆ ತಿಳಿಯಿತು? ತಮಗಲ್ಲದೆ ಅದು ಯಾರಿಗೂ ಗೊತ್ತಿಲ್ಲವೆಂದು ಅವರು ಭಾವಿಸಿದ್ದರು .......ಹಾಗಾದರೆ ಉಳಿದವರೂ ತಮ್ಮಂತೆಯೇ ಅಪರಾಧಿಗಳೇ? ಆಶಾ, ಸುಧಾ, ಆನಂದ, ಕೊನೆಗೆ ನ್ಯಾಯಾಧೀಶ ಧರ್ಮಸಿಂಗ್........ ಇವರೆಲ್ಲಾ ದ್ರೋಹಿಗಳೇ? ಇರಬಹುದು. ಅವರ ಎದೆ ನಡುಗಿತು. ಬೆಳ

ಗಾದ ಕೂಡಲೇ ದ್ವೀಪವನ್ನು ಬಿಟ್ಟು ಹೊರಟುಬಿಡಬೇಕೆಂದು ಯೋಚಿಸಿದರು. ಇದೇ ಯೋಚನೆ ಅವರನ್ನು ಕಾಡತೊಡಗಿತು. ನಿದ್ರೆ ಹತ್ತಿರ ಸುಳಿಯಲಿಲ್ಲ.

*   *   *

ಆಶಾ ಹಾಸಿಗೆಯ ಮೇಲೆ ಮಲಗಿ ಯಾವುದೋ ಪುಸ್ತಕವನ್ನು ಓದುತ್ತಿದ್ದಳು. ಘಂಟೆ ಆಗಲೇ ಒಂದಾಗಿದ್ದರೂ ಅವಳಿಗೆ ಕಣ್ಣುಮುಚ್ಚಲು ಧೈರ್ಯ ಬರಲಿಲ್ಲ. ದೀಪವಾರಿಸಲೂ ಅವಳಿಗೆ ಭಯವಾಗುತ್ತಿತ್ತು. ಕ್ಷಣ ಕ್ಷಣಕ್ಕೂ ಅವಳ ಮನಸ್ಸು ತನ್ನ ಭೂತ ಜೀವನದ ಘಟನೆಗಳ ಕಡೆಗೆ ಹರಿಯುತ್ತಿತ್ತು. ಶಿವಕುಮಾರನ ಚಿತ್ರ ಅವಳು ಮರೆಯದಾದಳು...... .... ಅವನನ್ನು ಮೊದಲು ನೋಡಿದ್ದು ಎಲ್ಲಿ? ಶಿಶುವಿಹಾರದಲ್ಲಿ........ಕೆಲಸಕ್ಕೆ ಸೇರಿದಾಗ. ಆಮೇಲೆ ಅವನ ಮನೆಯಲ್ಲಿ. ಅವನ ಮೇಲ್ವಿಚಾರಣೆ ಮತ್ತು ವಿಶೇಷಶಿಕ್ಷಣಕ್ಕಾಗಿ ನೇಮಿತಳಾಗಿದ್ದಳು. ಆಗಿನ್ನೂ ಅವನಿಗೆ ಏಳೆಂಟುವರ್ಷ. ರಮಾನಾಥನ ಮೊದಲ ಹೆಂಡತಿಯ ಮಗ ಅವನು....ತಾಯಿ ಹೋದ ತಬ್ಬಲಿ. ರಮಾನಾಥನ ಎರಡನೆಯ ಹೆಂಡತಿ ಪ್ರಮೀಳ, ಶಿವಕುಮಾರನ ಮಲತಾಯಿಯಲ್ಲದೆ ತಾಯಿ ಹೇಗಾದಾಳು? ......... ಮದುವೆಯಾಗಿ ನಾಲ್ಕಾರು ವರ್ಷಗಳಾದರೂ ಆಕೆಗೆ ಮಕ್ಕಳಾಗಿರಲಿಲ್ಲ........ಸವತಿಯ ಮಗನ ಮೇಲಿನ ದ್ವೇಷ ಇನ್ನೂ ಹೆಚ್ಚಿತು ಶಿವನ ಮೇಲಿನ ಆಕೆಯ ಕ್ರೂರ ದೃಷ್ಟಿಯನ್ನು ಕಂಡು ಆಶಾ ಅನೇಕ ವೇಳೆ ನಡುಗಿದ್ದಳು. ಎಂದಾದರೊಂದು ದಿನ ಅವಳಿಂದ ಶಿವನಿಗೆ ವಿಪತ್ತು ತಪ್ಪಿದ್ದಲ್ಲ ಎಂದು ನಿರ್ಧರಿಸಿದ್ದಳು. ಕ್ರಮೇಣ ತನ್ನನ್ನು ಮೆಚ್ಚಿಸಲು ಪ್ರಮೀಳ ಬೇಕಾದಹಾಗೆ ಖರ್ಚು ಮಾಡಲು ಪ್ರಾರಂಭಿಸಿದಳು. ತನ್ನಿಂದ ಯಾವ ಪಾಪದ ಕಾರ್ಯ ಮಾಡಿಸಲು ತನಗಾಗಿ ಅಷ್ಟು ಖರ್ಚು ಮಾಡುತ್ತಿದ್ದಾಳೆಂಬುದನ್ನು ತಿಳಿದು ಆಶಾಗೆ ಭಯವಾಯಿತು. ಆದರೆ ತಿಳಿದೂ ತಿಳಿದೂ ಅವಳ ಬಲೆಗೆ ಬಿದ್ದೆನಲ್ಲಾ. ಅವಳ ಪಾಪಕೃತ್ಯದಲ್ಲಿ ತಾನು ಭಾಗಿಯಾದನೆಲ್ಲಾ ....ಶಿವ ತನ್ನನ್ನು ತಾಯಿಯೆಂದೇ ತಿಳಿದಿರಲಿಲ್ಲವೇ? ನಾನೇಕೆ ಅಂತಹ ಕೆಲಸಕ್ಕೆ ಕೈಹಾಕಿದೆ ಅದೆಲ್ಲಾ ನಿಜವೇ? ಶಿವಕುಮಾರ ಕೊಲೆಗೀಡಾದನೇ? ಆ ಕೊಲೆಯಲ್ಲಿ

ತನ್ನ ಕೈವಾಡವಿತ್ತೇ? ರಮಾನಾಥರಿಗೆ, ಏಕೆ, ತನ್ನ ಆತ್ಮಕ್ಕೇ ದ್ರೋಹ ಬಗೆದಂತಾಗಲಿಲ್ಲವೇ ? ಛೆ! ಎಲ್ಲಾ ಸುಳ್ಳು .. ....ಶಿವಕುಮಾರ ಕೊಲೆಯಾಗಲಿಲ್ಲ...... ... ತಾನಿಲ್ಲದ ಸಮಯದಲ್ಲಿ ಅಕಸ್ಮಾತ್ ನೀರಿನಲ್ಲಿ ಮುಳಗಿ ಸತ್ತ. ಅದು ತನ್ನ ತಪ್ಪಲ್ಲ.... ....

ಆದರೆ ಒಳ ಮನಸ್ಸು- ಅಂತರ್ಯ- ಹೇಳುತ್ತಿತ್ತು: 'ಇಲ್ಲ, ಶಿವಕುಮಾರನ ಮರಣ ಖಂಡಿತವಾಗಿಯೂ ಆಕಸ್ಮಿಕವಲ್ಲ, ಅದು ಕೊಲೆ.... ಕಗ್ಗೊಲೆ.... ನೀನೇ ಕೊಲೆಗಾರ್ತಿ.. ..'

ತಕ್ಷಣ ಅವಳಿಗೆ ಕಿರ್ಣಚಂದನ ಆಕಸ್ಮಿಕದ ಕಡೆಗೆ ಮನಸ್ಸು ಹರಿಯಿತು. ಅವನೇಕೆ ಸತ್ತ ? ಆತ್ಮಹತ್ಯವೇ ? ಸಾಯಲು ಅವನೇಕೆ ಇಷ್ಟಪಟ್ಟ ? ತಾನು ಎಂದೂ ಸಾವನ್ನು ಬಯಸಿರಲಿಲ್ಲ. ಎಲ್ಲರೂ ಹಾಗೆಯೇ ಅಲ್ಲವೇ ?

೬

ಆನಂದ ಕನಸು ಕಾಣುತ್ತಿದ್ದ. ತನ್ನ ಡಿಸ್ಪೆನ್ಸರಿಯ ಆಪರೇರ್ಷ ರೂಂ. ಆಪರೇರ್ಷ ಟೇಬಲ್ಲಿನ ಮೇಲೆ ಯಾರನ್ನೋ ಮಲಗಿಸಲಾಗಿದೆ. ಅವರಿಗೆ ತಾನು ಆಪರೇರ್ಷ ಮಾಡಬೇಕಾಗಿದೆ. ಇಲ್ಲ, ಆ ನೆಪದಲ್ಲಿ ಕೊಲೆ ಮಾಡಬೇಕಾಗಿದೆ..... ಪಕ್ಕದಲ್ಲಿ ನರ್ಸ್ ನಿಂತಿದ್ದಾಳೆ...... ಯಾರದು ? ಓಹೋ ಆಶಾದೇವಿ.... ಮೇಜಿನ ಮೇಲೆ ಮಲಗಿಸಿರುವ ವ್ಯಕ್ತಿ ಯಾರು..........? ನಿದಾನವಾಗಿ ಮೇಜಿನ ಬಳಿ ಬಂದಿದ್ದಾಯಿತು. ..... ಹರಿತವಾದ ಆಯುಧಗಳು ಪಕ್ಕದ ಮೇಜಿನ ಮೇಲಿವೆ...... ಕೈಗಳೇಕೆ ನಡುಗುತ್ತಿವೆ? ... ಹೌದು, ಕುಡಿದದ್ದು ಮಿತಿಮೀರಿತು...... ...... ಅಮಲೇರಿರುವುದೇ ಕೈ ನಡುಗುವುದಕ್ಕೆ ಕಾರಣ. ತಾನು ಕೊಲ್ಲಬೇಕಾಗಿರುವುದು ಯಾರನ್ನು? ಅಂದಹಾಗೆ ನೆನಪಾಯ್ತು.... ವಿಮಲಾದೇವಿಯನ್ನು.... ಅವಳಿಗೆ ಕ್ಲೋರೋಫಾರಂ ಕೊಡಲಾಗಿದೆ. ನರ್ಸ್ ನಿಧಾನವಾಗಿ ರೋಗಿಗೆ ಹೊದಿಸಿದ್ದ ವಸ್ತ್ರವನ್ನು ತೆಗೆದಳು. ಆಕೆ ವಿಮಲಾದೇವಿಯಲ್ಲ. ಯಾರದು ? ಸುಧಾದೇವಿ..... ನಗುತ್ತಾ

ಇದ್ದಾಳೆ.....ಅವಳ ನಗುವಿಗೆ ಟೇಬಲ್ಲು ಅಲ್ಲಾಡುತ್ತಿದೆ......'ನರ್ಸ್, ಟೇಬಲ್ಲನ್ನು ಭದ್ರವಾಗಿ ಹಿಡಿದಿಕೊ....'

ತಟಕ್ಕನೆ ಅವನಿಗೆ ಎಚ್ಚರವಾಯ್ತು......ಯಾರೋ ಅವನನ್ನು ಅಲ್ಲಾಡಿಸಿ ಎಚ್ಚರಗೊಳಿಸಿದ್ದರು. ಹೌದು ಶಿವರಾಮು ಕೂಗುತ್ತಿದ "ಡಾಕ್ಟರ್......ಡಾಕ್ಟರ್......"

ಆನಂದನಿಗೆ ಸಂಪೂರ್ಣವಾಗಿ ಎಚ್ಚರವಾಯಿತು. ಹಾಸಿಗೆಯಿಂದ ಏಳುತ್ತಾ, "ಏನು, ವಿಷಯವೇನು?" ಎಂದ.

"ನನ್ನ ಹೆಂಡತಿ"

"ನಿನ್ನ ಹೆಂಡತಿ ....ಏನು?"

"ಅವಳು ಎದ್ದೇ ಇಲ್ಲ ಡಾಕ್ಟರ್. ಏನು ಮಾಡಿದರೂ ಎಚ್ಚರವಾಗುತ್ತಿಲ್ಲ. ಬೇಗ ಬಂದು ನೋಡಿ ಡಾಕ್ಟರ್" ಎಂದ ಶಿವರಾಮು, ಆತುರದ ಧ್ವನಿಯಲ್ಲಿ.

ಆನಂದ ಸರ್‍ರನೆ ಎದ್ದು, ಶಿವರಾಮುನೊಡನೆ ಹೊರಟ. ಇಬ್ಬರೂ ಸರೋಜ ಮಲಗಿದ್ದ ಕೋಣೆಗೆ ಬಂದರು. ಆನಂದ ಅವಳನ್ನು ಚೆನ್ನಾಗಿ ಪರೀಕ್ಷಿಸಿ ಭಯಗ್ರಸ್ತವಾದ ಕಣ್ಣುಗಳಿಂದ ಶಿವರಾಮುನನ್ನು ದಿಟ್ಟಿಸಿನೋಡಿ, ತಲೆಯಲ್ಲಾಡಿಸಿದ.

"ಏಕೆ. ಡಾಕ್ಟರ್, ಏನಾಗಿದೆ?"

ಆನಂದ ಮಾತನಾಡಲಿಲ್ಲ.

"ಏಕೆ, ಅವಳು......"

"ಹೌದು, ತೀರಿಹೋಗಿದ್ದಾಳೆ...."

ಶಿವರಾಮನ ಮುಖ ನಿಸ್ತೇಜವಾಯಿತು. ಕಣ್ಣುಗಳಲ್ಲಿ ನೀರಿನ ಹನಿಗಳು ಮೂಡಿದವು.

ಆನಂದ ಕೇಳಿದ:

"ಮೊದಲಿನಿಂದ ಅವಳ ಆರೋಗ್ಯ ಹೇಗಿತ್ತು ?"

"ಚೆನ್ನಾಗಿಯೇ ಇದ್ದಳು. ಆದರೆ ಸ್ವಲ್ಪ ವೀಕ್ ಆಗಿದ್ದಳು."

"ನಿದ್ರೆ ಚೆನ್ನಾಗಿ ಬರುತ್ತಿತ್ತೋ ?"

"ಹ್ಞೂಂ, ಚೆನ್ನಾಗಿಯೇ ನಿದ್ರೆ ಮಾಡುತ್ತಿದ್ದಳು."

"ನಿದ್ರೆ ಬರಲು ಯಾವುದಾದರೂ ಔಷಧಿ ತೆಗೆದುಕೊಳ್ಳುತ್ತಿದ್ದಳೋ ?"

"ಇಲ್ಲ, ನನಗೆ ತಿಳಿದಿರುವಂತೆ ಏನೂ ತೆಗೆದುಕೊಳ್ಳುತ್ತಿರಲಿಲ್ಲ." ಆನಂದ ಕೊಠಡಿಯನ್ನೆಲ್ಲಾ ಒಂದು ಬಾರಿ ಪರೀಕ್ಷಿಸಿದ. ಅಂತಹ ಔಷಧಿಗಳಾವೂ ಸಿಕ್ಕಲಿಲ್ಲ.

"ನಿದ್ರೆ ಬರಲು ತೆಗೆದುಕೊಳ್ಳುವ ಔಷಧಿ ಅಷ್ಟು ಅಪಾಯವೇ ?" ಶಿವರಾಮ ಪ್ರಶ್ನಿಸಿದ.

"ಹೌದು, ಹೆಚ್ಚಾಗಿ ತೆಗೆದುಕೊಂಡರೆ....ಅದಿರಲಿ, ರಾತ್ರಿ ಮಲಗುವ ಮುಂಚೆ ಏನಾದರೂ ಕುಡಿದಳೋ ?"

"ನೀವು ಕೊಟ್ಟ ಔಷಧಿ ಹೊರತು ಏನೂ ಕುಡಿಯಲಿಲ್ಲ."

*  *  *  *

ಬೆಳಗ್ಗೆ ಎಂಟು ಘಂಟೆ ಹೊತ್ತು. ಉಪಾಹಾರದ ಸಮಯ ಸಮೀಪಿಸಿತ್ತು. ಎಲ್ಲರೂ ಡೈನಿಂಗ್‌ಹಾಲಿಗೆ ಹೋಗಲು ಸಿದ್ಧರಾಗಿದ್ದರು. ಗೋವಿಂದ್, ಧರ್ಮಸಿಂಗ್ ಅಂಗಳದಲ್ಲಿ ಕೂತು ಹರಟುತ್ತಿದ್ದರು.

ಆಶಾದೇವಿ, ಅಜಯರು ಭವನದ ಹಿಂದೆ ಹೋಗಿ, ಸಣ್ಣ ಗುಡ್ಡ ಹತ್ತಿ ರಾಂಗಾಂವ್ ಕಡೆಯಿಂದ ಬೋಟ್ ಏನಾದರೂ ಬರುತ್ತಿದೆಯೇ ಎಂದು ನೋಡುತ್ತಿದ್ದರು. ಅದೇ ಉದ್ದೇಶ್ಯದಿಂದ ಅಲ್ಲಿಗೆ ಬಂದ ಸುಧಾ ಅವರನ್ನು ಸೇರಿದಳು. ಆದರೆ ಬೋಟಿನ ಸುಳಿವೇ ಇರಲಿಲ್ಲ

ಅಜಯ ಎಂದ: "ಏಕೆ, ಇನ್ನೂ ಬರಲಿಲ್ಲ ?"

"ಈ ಕಡೆಯ ಜನ ಶುದ್ಧ ಸೋಮಾರಿಗಳು. ಎಂಟು ಘಂಟೆಗೆ ಮುಂಚೆ ಏಳುವುದಿಲ್ಲ" ಎಂದಳು ಆಶಾ.

ಮೂವರೂ ನಕ್ಕರು.

ಸ್ವಲ್ಪ ಹೊತ್ತು ಮೌನ ಆವರಿಸಿತು. ಮೌನ ಮುರಿದವಳು ಆಶಾ. "ನಿಮಗೇನಾದರೂ ಸಮಸ್ಯೆ ಬಗೆ ಹರಿಯಿತೆ ?"

"ಯಾವ ಸಮಸ್ಯೆ ?"

"ಅದೇ....ಕಿರ್ತಿಚಂದನ ವಿಷಯ. ಅವನೇಕೆ ಆತ್ಮಹತ್ಯೆ ಮಾಡಿ ಕೊಂಡ ? ನಾನಂತೂ ರಾತ್ರಿಯೆಲ್ಲಾ ಅದೇ ಯೋಚಿಸುತ್ತಿದ್ದೆ."

"ಅದು ಆತ್ಮಹತ್ಯೆಯಲ್ಲವೆಂದು ನನ್ನ ಊಹೆ."

ಆಶಾ, ಅಜಯರಿಬ್ಬರೂ ಚಕಿತರಾದರು.

ಆಶಾ ಆಶ್ಚರ್ಯದಿಂದ ಕೇಳಿದಳು. "ಆತ್ಮಹತ್ಯೆಯಲ್ಲವೆಂದು ಹೇಗೆ ಹೇಳುತ್ತೀರಿ ?"

ಢಣ್, ಢಣ್, ಢಣ್. ಎಲ್ಲರನ್ನೂ ಉಪಾಹಾರಕ್ಕೆ ಕರೆಯುವ ಘಂಟೆ ಬಾರಿಸತೊಡಗಿತು. ಮೂವರೂ ಸರಸರನೆ ಗುಡ್ಡವನ್ನಿಳಿದು ಬಂದರು.

ಹಿಂದಿನ ಅಂಗಳದಲ್ಲಿ ಆನಂದ ನಿಂತಿದ್ದ. ಅವನು ಯಾವುದೋ ಯೋಚನೆಯಲ್ಲಿ ಮುಳುಗಿದ್ದ. ಅವರುಗಳು ತೀರಾ ಹತ್ತಿರ ಬಂದಮೇಲೆ ಅವನ ಯೋಚನಾಲಹರಿ ನಿಂತಿತು. ಎಲ್ಲರೂ ಒಳಕ್ಕೆ ಬಂದರು. ಗೋವಿಂದ್ ಧರ್ಮಸಿಂಗ್, ಆಗಲೇ ಮೇಜಿನ ಬಳಿಯಿದ್ದ ಕುರ್ಚಿಗಳಲ್ಲಿ ಕೂತಿದ್ದರು. ಶಿವರಾಮು ತಿಂಡಿ ತೀರ್ಥಗಳನ್ನು ಮೇಜಿನ ಮೇಲೆ ಜೋಡಿಸುತ್ತಿದ್ದ. ಅವನ ಮುಖ ಉತ್ಸಾಹವಿಲ್ಲದೆ ಬಾಡಿದಂತಿತ್ತು. ಸುಧಾ ಇದನ್ನು ಗಮನಿಸಿ ಆಶಾಗೆ ಹೇಳಿದಳು. "ಯಾಕೋ ಶಿವರಾಮು ಸಪ್ಪಗಿದ್ದಾನೆ."

ಉಪಾಹಾರ ಆರಂಭವಾಯಿತು. ಅವರು ಲೋಕಾಭಿರಾಮವಾಗಿ ಮಾತನಾಡತೊಡಗಿದರು. ಎಲ್ಲರ ರುಚಿಗೂ ಹೊಂದುವಂತೆ ಬಗೆ ಬಗೆಯ ತಿಂಡಿಗಳಿದ್ದವು. ಇಡ್ಲಿ, ದೋಸೆ, ಪೂರಿಪಲ್ಯ, ಚಪಾತಿ, ಕೇಸರೀಭಾತು, ಕಾಫಿ, ಟೀ, ಓವಲ್ಟಿನ್ ಇತ್ಯಾದಿ. ಮಾತಿನ ಭರದಲ್ಲಿ ಅವರುಗಳು ಮಿತಿ ಮೀರಿ ತಿಂದು ತೇಗಿದ್ದರು.

ಆಶಾ ಶಿವರಾಮುನ ಕಡೆಗೆ ತಿರುಗಿ ಕೇಳಿದಳು. "ಸರೋಜ ಹೇಗಿ ದ್ದಾಳೆ, ಶಿವರಾಮು ?"

ಶಿವರಾಮು ಮಾತಾಡಲಿಲ್ಲ. ಅವನ ಮುಖ ವಿವರ್ಣವಾಯಿತು. ಆನಂದನ ಕಡೆಗೆ ತಿರುಗಿ ನೋಡಿ ಮೇಜಿನ ಮೇಲಿನ ತಟ್ಟೆ, ಲೋಟಗಳನ್ನು ತೆಗೆದುಕೊಂಡು ಒಳಗೆ ಹೊರಟುಹೋದ. ಆನಂದ ಗಂಟಲು ಸರಿಪಡಿಸಿ

ಕೊಂಡು ಹೇಳಿದ: "ನಾವೆಲ್ಲಾ ಒಂದು ಘಟನೆಗೆ ವಿಷಾದಿಸಬೇಕಾಗಿದೆ...... ಸರೋಜ ನಿನ್ನೆ ರಾತ್ರಿ ಶಾಂತರೀತಿಯಲ್ಲಿ ತೀರಿಹೋದಳು." ಎಲ್ಲರೂ ಆವಾಕ್ಕಾದರು.

ಆಶಾ ಚೀರಿದಳು. "ಆ್ಞ.... .....ಏನೋ........ಹೊಸ, ಒಂದಾಗಿ ನಿಂದ ಆಗಲೇ ಎರಡು ಸಾವು."

ಧರ್ಮಸಿಂಗ್ ನಡುಗುವ ಧ್ವನಿಯಲ್ಲಿ ಕೇಳಿದರು. "ಏನು?.... ... ಸರೋಜಮ್ಮನ ಮರಣವೇ ? ಸಾವಿಗೆ ಕಾರಣ ?"

"ಪರೀಕ್ಷೆಯಿಲ್ಲದೆ ಹೇಳಲು ಸಾಧ್ಯವಿಲ್ಲ"

ಆಶಾ ಸುತ್ತಲೂ ಒಂದು ಬಾರಿ ನೋಡಿ, ಶಿವರಾಮ ಇಲ್ಲದಿರುವು ದನ್ನು ಗ್ರಹಿಸಿ, "ನಾನು ನೋಡಿದಾರಭ್ಯ ಅವಳು ಬಹಳ ಹೆದರಿದ್ದಳು. ಅದಕ್ಕೆ ಏನೋ ಕಾರಣವಿರಬೇಕು....ಆ ಹೆದರಿಕೆಯಿಂದಲೇ ಅವಳು......" ಎಂದಳು.

"ಛೆ ! ಅದು ಸಾಧ್ಯವಿಲ್ಲ" ಎಂದರು ಗೋವಿಂದನಾಯರ್.

ಸುಧಾದೇವಿ "ಅವಳ ಮರಣಕ್ಕೆ ಅವಳ ಮನಸ್ಸಾಕ್ಷಿಯೇ ಕಾರಣ ವಿರಬೇಕು" ಎಂದಳು.

"ಅಂದರೆ..... ......?" ಕುತೂಹಲದಿಂದ ಎಲ್ಲರೂ ಅವಳ ಕಡೆಗೆ ತಿರುಗಿ ದರು.

"ನಾವೆಲ್ಲರೂ ಕೇಳಿದಂತೆ ಸರೋಜ ಶಿವರಾಮರ ಮೇಲೆ ಕೊಲೆಯ ಆಪಾದನೆ ಹೊರಿಸಲಾಗಿದೆಯಲ್ಲವೇ ? ಆಪಾದನೆ ಸುಳ್ಳಾಗಿರಲಾರದು."

"ಹಾಗಾದರೆ ?"

"ಹೌದು, ನಾನು ಹೇಳುವುದು ಅದೇ. ಅದು ನಿಜವಿರಬೇಕು. ಕೊಲೆಯಲ್ಲಿ ಅವಳೂ ಭಾಗಿಯಾಗಿರಬೇಕು........ನಿನ್ನೆಯವರೆಗೂ ಅದು ಯಾರಿಗೂ ತಿಳಿದಿಲ್ಲವೆಂದು ಭಾವಿಸಿದ್ದರು. ಆದರೆ ನಿನ್ನೆ ಗುಟ್ಟು ರಟ್ಟಾ ಯಿತು. ಆ ಭಯ, ಮೊದಲೇ ನಿತ್ರಾಣವಾಗಿದ್ದ ಮನಸ್ಸಿನ ಮೇಲೆ ಪರಿ ಣಾಮ ಉಂಟುಮಾಡಿರಬೇಕು." ಆನಂದ, "ಹಾಗೂ ಇರಬಹುದು....

ಆದರೆ ಅವಳ ಆರೋಗ್ಯದ ಪೂರ್ವ ಚರಿತ್ರೆಯನ್ನು ತಿಳಿಯದೆ ನಿರ್ಧರಿಸುವುದು ಕಷ್ಟ" ಎಂದ.

ಸುಧಾ, "ಇದು ವಿಧಿಯ ಕೆಲಸವೆಂದು ನನ್ನ ಅಭಿಪ್ರಾಯ. ........ ನೀವು ನಂಬಿದರೆ ನಂಬಬಹುದು. ಅಥವಾ ಬಿಡಬಹುದು. ನನಗಂತೂ ವಿಧಿಯ ಕೈವಾಡವೆಂದೇ ತೋರುತ್ತಿದೆ. ಅಪರಾಧಿಗೆ ವಿಧಿ ಸರಿಯಾದ ಶಿಕ್ಷೆ ವಿಧಿಸಿದೆ ಎಂದು ನನ್ನ ನಂಬಿಕೆ" ಎಂದಳು. ಅವಳ ಮಾತುಗಳಲ್ಲಿ ಕಾಠಿಣ್ಯದ ಸ್ವರವಿತ್ತು. ಯಾರೂ ಇದನ್ನು ಒಪ್ಪಲಿಲ್ಲ. ಆದರೆ ಧರ್ಮಸಿಂಗ್ ಒಪ್ಪಿಗೆಯ ತಲೆ ತೂಗಿದರು. ಅಜಯ ಕೇಳಿದ. "ನಿನ್ನೆ ರಾತ್ರಿ ಇಲ್ಲಿಂದ ಮಲಗಲು ಹೋದಮೇಲೆ ಅವಳು ಏನನ್ನಾದರೂ ಸೇವಿಸಿದಳೇ ?"

"ಏನೂ ಇಲ್ಲ" ಆನಂದ ಹೇಳಿದ.

"ಹೇಗೆ ಗೊತ್ತು. ಹಾಲನ್ನೋ, ನೀರನ್ನೋ ಸೇವಿಸಿರಬಹುದು."

"ಇಲ್ಲ, ಶಿವರಾಮನೇ ಹೇಳಿದ. ಏನನ್ನೂ ಕುಡಿಯಲಿಲ್ಲವೆಂದು."

"ಅವನು ಹಾಗೆ ಹೇಳಬಹುದು ... ಆದರೆ ?" ಗೋವಿಂದನಾಯರ್ ಏನನ್ನೋ ಸೂಚಿಸುವಂತೆ ನುಡಿದರು. ಅವರ ಧ್ವನಿಯಲ್ಲಿ ಸಂದೇಹದ ವಾಸನೆಯಿತ್ತು.

"ಹಾಗಾದರೆ ನಿಮ್ಮ ಅಭಿಪ್ರಾಯ........ ಶಿವರಾಮನೇ..... ......"

"ಹೌದು, ಯಾಕಿರಬಾರದು ?" ಸುತ್ತಲೂ ಒಂದು ಬಾರಿ ನೋಡಿ ಸಣ್ಣ ಧ್ವನಿಯಲ್ಲಿ ಹೇಳತೊಡಗಿದರು ನಾಯರ್. "ಆಸ್ತಿಯ ಆಸೆಗಾಗಿ ಇಬ್ಬರೂ ಸೇರಿ ಆ ಮುದುಕಿಯನ್ನು ತೀರಿಸಿಬಿಟ್ಟಿದ್ದಾರೆ..........ಅವರಿಬ್ಬರ ಹೊರತು ಯಾರಿಗೂ ಈ ವಿಷಯ ಗೊತ್ತಿರಲಿಲ್ಲ. ಹತ್ತಾರು ವರ್ಷಗಳು ಕಳೆದಮೇಲೆ ತಾವು ಬದುಕಿಕೊಂಡವೆಂದೇ ತಿಳಿದಿದ್ದರು. ಸರಿ, ನಿನ್ನೆ ಆ ಧ್ವನಿ ಅವರ ಗುಟ್ಟನ್ನು ರಟ್ಟು ಮಾಡಿದೆ. ಇಬ್ಬರೂ ಬಹಳ ಹೆದರಿದ್ದಾರೆ. ಶಿವರಾಮನಿಗೆ ಗೊತ್ತು—ತನ್ನ ಹೆಂಡತಿಯ ಮನಸ್ಸಿನ ದೌರ್ಬಲ್ಯ........ ಯಾವ ಕ್ಷಣದಲ್ಲಿಯಾದರೂ ಅವಳು ರಹಸ್ಯವನ್ನು ಬಯಲುಮಾಡಬಹುದು ಕೊಲೆಯ ಆಪಾದನೆಯನ್ನು ಒಪ್ಪಿಕೊಳ್ಳಬಹುದು........... ಆದ್ದರಿಂದ

ಅವಳ ಬಾಯನ್ನು ಮುಚ್ಚಿಸಬೇಕು........ಸರಿ, ಹಾಲಿನಲ್ಲೋ ನೀರಿನಲ್ಲೋ ಏನನ್ನೋ ಬೆರೆಸಿ ಅವಳ ಕಥೆಯನ್ನು ಮುಗಿಸಿದ್ದಾನೆ."

ಎಲ್ಲರೂ ಸ್ತಬ್ಧರಾಗಿ ಕೇಳುತ್ತಿದ್ದರು.

ಆನಂದ ಅನುಮಾನದಿಂದ ನುಡಿದ, "ಆದರೆ ಯಾರೂ ಕೈಯಾರೆ ಹೆಂಡತಿಯನ್ನು ಕೊಲ್ಲಲಾರರು ಎಂದು ನನ್ನ ನಂಬಿಕೆ."

ನಾಯರ್ ನಕ್ಕು ಹೇಳಿದರು, "ತನ್ನ ತಲೆ ಹೋಗುವ ಸಂದರ್ಭ ದಲ್ಲಿ ಮನುಷ್ಯ ಎಂತಹ ಹೀನಕೃತ್ಯವನ್ನಾದರೂ ಮಾಡಬಲ್ಲ."

ಶಿವರಾಮು ಮತ್ತೆ ಒಳಕ್ಕೆ ಬಂದ. ಅವರ ಚರ್ಚೆ ಅಲ್ಲಿಗೇ ನಿಂತಿತು. ಧರ್ಮಸಿಂಗ್, "ಶಿವರಾಮು, ನಿನ್ನ ಹೆಂಡತಿ ವಿಷಯ ತಿಳಿದು ಬಹಳ ದುಃಖ ವಾಯಿತು. ಆನಂದ್ ಎಲ್ಲಾ ಹೇಳಿದರು" ಎಂದರು.

ಶಿವರಾಮು ಏನನ್ನೂ ಹೇಳದೆ ಮುಖ ಕೆಳಕ್ಕೆ ಹಾಕಿ ಹಾಗೇ ನಿಂತಿದ್ದ. ನಾಯರ್ ಕೇಳಿದರು, "ಸಾಮಾನ್ಯವಾಗಿ ಬೋಟ್ ಇಲ್ಲಿಗೆ ಎಷ್ಟು ಹೊತ್ತಿಗೆ ಬರುತ್ತದೆ ?"

"ಬೆಳಗ್ಗೆ ಎಂಟರೊಳಗೇ ಬರುತ್ತಿತ್ತು. ಶ್ಯಾಮಲಾಲನಿಗೆ ಏನು ಬಂತೋ ಗೊತ್ತಿಲ್ಲ.........ಅವನಿಲ್ಲದಿದ್ದರೆ ಅವನ ತಮ್ಮನಾದರೂ ಬರ ಬೇಕಾಗಿತ್ತು."

ಅಜಯ ಕೇಳಿದ, "ಈಗ ಎಷ್ಟು ಗಂಟೆ ?"

ಧರ್ಮಸಿಂಗ್ ತಮ್ಮ ಕೈಗಡಿಯಾರ ನೋಡಿಕೊಂಡು, "ಆಗಲೇ ಹತ್ತು ಗಂಟೆ" ಎಂದರು.

* * * *

ಆನಂದಭವನದ ಮುಂಭಾಗದ ಅಂಗಳದಲ್ಲಿ ಅಜಯಕುಮಾರ್, ಗೋವಿಂದನಾಯರ್, ನಿಂತು ರಾಂಗಾಂವ್ ಕಡೆಗೆ ದಿಟ್ಟಿಸಿನೋಡುತ್ತಿದ್ದರು.

"ಅಂದ ಹಾಗೆ ಈ ಬೋಟ್ ........." ಎಂದ ಅಜಯ.

"ಬರುತ್ತಿದೆಯೇ..... . ಎಲ್ಲಿ ?...." ಎಂದು ಕಣ್ಣರಳಿಸಿ ನೋಡಿದರು ನಾಯರ್.

"ಬರುತ್ತಿಲ್ಲ, ಅದೇ ಯೋಚನೆ ಮಾಡುತ್ತಿದ್ದೇನೆ......ಏಕೆ ಬರಲಿಲ್ಲ ?"

"ನನಗೇನೋ ಅದು ಬರುವುದಿಲ್ಲ ಎಂದೆನಿಸುತ್ತಿದೆ....... ಅದು ಬರದಿರುವುದು ಆಕಸ್ಮಿಕವಲ್ಲ... ಅದೂ ಮೋಸಕ್ಕೆ ಸೇರಿದ ಒಂದು ಭಾಗ......"

"ಅಂದರೆ ?"

"ಹೊರಗಡೆಯಿಂದ ಸಹಾಯ ಬರುವವರೆಗೂ ನಾವು ಯಾರೂ ಈ ದ್ವೀಪವನ್ನು ಬಿಟ್ಟು ಹೋಗಲಾರೆವು."

ಅಜಯ ಒಳಗೇ ನಡುಗಿದ. ಅವನಿಗೆ 'ಈಜಿಕೊಂಡು ದಡ ಸೇರಲು ಆಗುವುದಿಲ್ಲವೇ' ಎಂಬ ಯೋಚನೆ ಬಂತು. ಆದರೆ ಎರಡು ಮೂರು ಮೈಲಿ ದೂರ ಆಳವಾದ ಸಮುದ್ರ ! ಅದರ ಯೋಚನೆ ಈಗೇಕೆ ಎಂದುಕೊಂಡು ಸುಮ್ಮನಾದ.

"ಸಮುದ್ರದ ದಡ ಬಹು ರಮ್ಯವಾಗಿದೆ....ಸ್ವಲ್ಪ ಹೊತ್ತು ಆ ಶಾಂತ ವಾತಾವರಣದ ಸವಿಯನ್ನು ಅನುಭವಿಸಿ ಬರುತ್ತೇನೆ" ಎನುತ್ತಾ ನಾಯರ್ ನಿದಾನವಾಗಿ ಸಮುದ್ರದ ಕಡೆ ಹೊರಟರು.

ಅಜಯ ಮನಸ್ಸಿನಲ್ಲೇ "ಬಹಳ ನಿರಾಶಾವಾದಿ ಇವರು......ಲೆಫ್ಟಿನೆಂಟ್ ಜನರಲ್ ಬೇರೆ ಆಗಿದ್ದರಂತೆ......ಹೇಡಿ....ಹೇಗೆ ಆದರೋ ನಾಬೇರೆ ಕಾಣೆ" ಎಂದುಕೊಂಡ.

* * * *

ಆನಂದ ಹೊರ ಅಂಗಳದಲ್ಲಿ ಒಂದು ಚಿಂತ. ಎಲ್ಲಿಗೆ ಹೋಗಬೇಕು, ಏನು ಮಾಡಬೇಕೆಂದು ಅವನಿಗೆ ತಿಳಿಯಲಿಲ್ಲ. ಅಂಗಳದ ಎಡಮೂಲೆ ಯಲ್ಲಿ ಅಜಯ ನಿಂತಿದ್ದ. ಸ್ವಲ್ಪ ದೂರದ ಒಂದು ಕಲ್ಲು ಬೆಂಚಿನ ಮೇಲೆ ಧರ್ಮಸಿಂಗ್ ಒರಗಿದ್ದರು. ಅವರು ಅರೆ ನಿದ್ರೆಯಲ್ಲಿದ್ದಂತೆ ತೋರುತ್ತಿತ್ತು. ಅಷ್ಟರಲ್ಲಿ ಒಳಗಡೆಯಿಂದ ಶಿವರಾಮ ಆನಂದನ ಬಳಿಗೆ ಸರ ಸರನೆ ಬಂದು "ಒಂದು ವಿಷಯ...ಒಳಕ್ಕೆ ಬನ್ನಿ" ಎಂದ. ಆನಂದ ಚಕಿತನಾದ. "ಏನದು ಶಿವರಾಮ ?" ಶಿವರಾಮ ಮಾತನಾಡದೆ ಭವನದ ಕಡೆಗೆ ಹೊರಟ. ಆನಂದ ಮೂಕನಾಗಿ ಅವನನ್ನು ಹಿಂಬಾಲಿಸಿದ. ಶಿವರಾಮ ನೇರವಾಗಿ ಡೈನಿಂಗ್ ಹಾಲಿಗೆ ಕರೆದುಕೊಂಡು ಹೋಗಿ "ಇಲ್ಲಿ ನಡೆಯುತ್ತಿರುವ ವ್ಯಾಪಾರ

ವಿಚಿತ್ರವಾಗಿದೆ ....ನನಗೆ ಅರ್ಥವಾಗುತ್ತಿಲ್ಲ" ಎಂದ. ಅವನು ಬಹಳ ಹೆದರಿದಂತೆ ಕಾಣುತ್ತಿತ್ತು.

ಆನಂದನಿಗೆ ಅರ್ಥವಾಗಲಿಲ್ಲ. "ಹಾಗಂದರೆ ಏನು? ಶಿವರಾಮ್.... ಸರಿಯಾಗಿ ಹೇಳು.... ಏನಾಯ್ತು ?"

"ಇಲ್ಲಿ ನೋಡಿ" ಎಂದು ಮೇಜಿನ ಮಧ್ಯ ಭಾಗದಲ್ಲಿದ್ದ ಗಾಜಿನ ಗೊಂಬೆಗಳ ಕಡೆಗೆ ಕೈಮಾಡಿ ತೋರಿಸಿ "ಇದೇ ಈ ಗೊಂಬೆಗಳು, ನಾನು ನೋಡಿದಂತೆ ಒಂಬತ್ತಿದ್ದವು."

ಹೌದು "ನಾವೂ ಎಣಿಸಿದ್ದೆವು..........ಒಂಬತ್ತಿವೆ."

"ಇಲ್ಲ.....ಅದೇ ನಾನು ಹೇಳುತ್ತಿರುವುದು.. ನಿನ್ನೆ ರಾತ್ರಿ, ನಾನು ಮಲಗಲು ಹೊರಟಾಗ ಎಂಟೇ ಇದ್ದವು. ಮೊದಲಿಂದ ಎಂಟೇ ಇದ್ದಿರ ಬಹುದು, ನಾನು ಸರಿಯಾಗಿ ಎಣಿಸಿರಲಿಲ್ಲವೇನೋ ಎಂದುಕೊಂಡೆ ... ಈಗ ನೋಡಿದರೆ ಏಳೇ ಇವೆ.........."

ಆನಂದನಿಗೆ, ಅದಕ್ಕೆ ಅಷ್ಟು ಗಮನ ಕೊಡಬೇಕಾದ ಕಾರಣವಿಲ್ಲ ವೆಂದೆನಿಸಿತು. ಅವನು ಸುಮ್ಮನಾದ. ಆದರೆ ಏನೋ ಹೊಳೆದಂತಾಗಿ "ನಿನ್ನ ಕಣ್ಣಿಗೆ ಹೇಗೆ ಬಿತ್ತು ಏಳೇ ಇರುವುದು? ಎಂದು ಕೇಳಿದ.

"ಮೇಜನ್ನು ಒರೆಸುವುದಕ್ಕೆ ಬಂದಾಗ ನನ್ನ ಗಮನ ಆಕಡೆ ಹೋಯಿತು."

*   *   *   *

ಸುಧಾ ಮತ್ತು ಆಶಾದೇವಿಯರು ಉಪಾಹಾರವಾದ ಮೇಲೆ ಭವನದ ಹಿಂದಿನ ಗುಡ್ಡವನ್ನು ಹತ್ತಿ ಬೋಟ್ ಬರುತ್ತಿದೆಯೇ ಎಂದು ನೋಡ ಬೇಕೆಂದು ಮಾತನಾಡಿ ಕೊಂಡಿದ್ದರು. ಆದರಂತೆ ಈಗ ಇಬ್ಬರೂ ಗುಡ್ಡ ವನ್ನು ಹತ್ತುತ್ತಿದ್ದರು. ಅದು ಅಷ್ಟೇನೂ ಎತ್ತರವಿರಲಿಲ್ಲ.....ಸುಮಾರು ನೂರು ಅಡಿಗಳಿರಬಹುದು. ಇಬ್ಬರೂ ಮೇಲೆ ಬಂದು ನಿಂತು ಅಲ್ಲೇ ಇದ್ದ ಒಂದು ಕಲ್ಲು ಬೆಂಚಿನ ಮೇಲೆ ಕುಳಿತರು. ರಾಂಗಾಂವ್ ಸರಿ ಯಾಗಿ ಕಾಣಿಸುತ್ತಿರಲಿಲ್ಲ. ಗಿಡಮರಗಳ ಮಧ್ಯ ಮರೆಯಾಗಿತ್ತು. ಬೋಟಿನ ಸುಳಿವೇ ಕಾಣಲಿಲ್ಲ.

ಸುಧಾ ಎಂದಳು, "ನಿನ್ನೆ ನಮ್ಮನ್ನು ಕರೆದುಕೊಂಡು ಬಂದವನು ಒಳ್ಳೆ ನಂಬಿಕಸ್ತನಂತಿದ್ದ. ಆದರೆ ಈದಿನ ಅವನು ಬಾರದಿರುವುದನ್ನು ನೋಡಿದರೆ ವಿಚಿತ್ರವಾಗಿದೆ........"

"ನನಗೂ ಅದೇ ಯೋಚನೆ.. ಬೇಗ ಬಂದರೆ ವಾಸಿ....ಇಲ್ಲಿಂದ ಹೊರಟು ಬಿಡಬೇಕು ಎನ್ನಿಸುತ್ತಿದೆ........."

"ನನಗಾದರೂ ಅಷ್ಟೆ..........ಎಲ್ಲರಿಗೂ ಬೇಕಾಗಿರುವುದು ಅಷ್ಟೆ. ಇಲ್ಲಿನ ಜೀವನ ಬಂಧನದಂತಿದೆ........ಆಶಾದೇವಿ....ಈಗ ನನಗೆನಿಸುತ್ತಿದೆ—ಆ ಕಾಗದವನ್ನು ನಾನು ಹೇಗೆ ನಂಬಿದೆ ಎಂದು........ಒಂದೂ ಸ್ಪಷ್ಟವಾಗಿರ ಲಿಲ್ಲ....ಆದರೆ ಆಗ ಸಂದೇಹವೇ ಬರಲಿಲ್ಲ. ...ಅದನ್ನು ಪೂರ್ಣವಾಗಿ ನಂಬಿ ಇಲ್ಲಿಗೆ ಬಂದೆ"

ಆಶಾ ಕೇಳಿದಳು "ನಿನ್ನೆ ರಾತ್ರಿ ಹೇಳಿದಿರಲ್ಲ.....ಆ ವಾದ ....ಅದನ್ನು ನಂಬುತ್ತೀರಾ ?"

"ಯಾವುದು ?ಸರೋಜಳ ಮರಣದ ವಿಚಾರವೇ ?"

"ಹ್ಞೂಂ"

"ನಂಬದೆ ಹಾಗೆ ಹೇಳಿವೆನೇ? ಸಂದೇಹವೇಕೆ ? ಅವಳ ಭಯಗ್ರಸ್ತ ಮುಖವನ್ನು ನೋಡಿಯೇ ನಾನು ನಿರ್ಧರಿಸಿದೆ.....ಶಿವರಾಮು ಹಾಲಿನ ಟ್ರೇಯನ್ನು ಎತ್ತಿ ಹಾಕಲು ಕಾರಣವೇನು ?....ಸರೋಜ ಒಳಗಿನಿಂದ ಏಕೆ ಹಾಗೆ ಓಡಿಬಂದಳು ?....ಆದ್ದರಿಂದ ಆಪಾದನೆ ನಿಜವಿರಲೇಬೇಕು.... ನೋಡಿ ಆಶಾದೇವಿ.. .....ನಾವೆಷ್ಟು ರಹಸ್ಯದಲ್ಲಿ ಅನ್ಯಾಯವನ್ನು ಮಾಡಿ ದರೂ ಅದು ವಿಧಿಗೆ ತಿಳಿದೇ ತಿಳಿಯುತ್ತದೆ....."

"ವಿಧಿ. ....ಹಾಗೆಂದರೆ ?

"ವಿಧಿ .... ಎಂದರೂ ಸರಿ, ದೇವರೆಂದರೂ ಸರಿ..... ಅದು ಅಪರಾಧಿಗೆ ತಕ್ಕ ಶಿಕ್ಷೆ ವಿಧಿಸುತ್ತದೆ"

"ಹಾಗಾದರೆ ...ಆಪಾದನೆ ಅವರಿಬ್ಬರ ವಿಷಯದಲ್ಲಿ ನಿಜವಾಗಿದ್ದರೆ.... ಉಳಿದವರ ವಿಷಯದಲ್ಲಿ ?"

ಸುಧಾ ಒಂದು ಕ್ಷಣ ಅಪ್ರತಿಭಳಾದಳು.......ಆಮೇಲೆ ನಿದಾನವಾಗಿ

ಹೇಳಿದಳು. "ಇರಬಹುದು....ಅಜಯ ತಾನೇ ಒಪ್ಪಿಕೊಂಡಿದ್ದಾನೆ. ನಾಯರ್‌ದೂ ನಿಜವಿರಬಹುದು."

"ಸರಿ, ಉಳಿದವರು"

"ಕೆಲವರ ವಿಷಯದಲ್ಲಿ ಉತ್ಪ್ರೇಕ್ಷೆಯಾಗಿದೆ.... ಉದಾಹರಣೆಗೆ ಧರ್ಮ ಸಿಂಗ್ ತಮ್ಮ ಕರ್ತವ್ಯವನ್ನು ಅವರು ಮಾಡಿದ್ದಾರೆ.....ಆನಂದರ ವಿಷಯ ದಲ್ಲೂ ಹಾಗೇ ಆಗಿರಬಹುದು....ನಿಮ್ಮದೂ ಅಷ್ಟೇ... ನನ್ನದೂ ಅಷ್ಟೇ"

ಆಶಾಗೆ ಆಶ್ಚರ್ಯವಾಯಿತು....ಕುತೂಹಲ ದೃಷ್ಟಿಯಿಂದ ಸುಧಾ ಳನ್ನು ನೋಡಿದಳು.

"ಅವರೆಲ್ಲರ ಎದುರಿಗೆ ಹೇಳುವುದು ಅನುಚಿತವೆಂದು ಸುಮ್ಮನಾದೆ. ....... ಗಂಡಸರೆದರು ಚರ್ಚಿಸುವ ವಿಷಯವಲ್ಲವದು...."

"ಯಾವ ವಿಷಯ?"

"ಕುಮಾರಿ ಚಂದ್ರಾ... ... ನನ್ನ ಬಳಿ ಕೆಲಸಕ್ಕಿದ್ದಳು. ಮೊದಲು ಸಭ್ಯ ಹುಡುಗಿಯೆಂದು ಭಾವಿಸಿದ್ದೆ.......ಆದರೆ ಆಮೇಲೆ ಅವಳ ಪೂರ್ವ ಚರಿತ್ರೆ ತಿಳಿದು ಬಂತು—ಕುಲಹೀನಳವಳು....ಅವಳ ಅನೈತಿಕ ಜೀವನ, ಅಸಭ್ಯವರ್ತನೆ, ನನಗೆ ಹಿಡಿಸಲಿಲ್ಲ. ಕೆಲಸದಿಂದ ತೆಗೆದು ಬಿಟ್ಟೆ. ಯಾವುದೋ ಸ್ತ್ರೀ ಸಮಾಜಕ್ಕೆ ಹೋಗಿ ಸೇರಿಕೊಂಡಳು. ಅವಳಿಂದ ಸ್ತ್ರೀ ಸಮಾಜಕ್ಕೇ ಅಪಾಯವೆಂದು, ಅದರ ಕಾರ್ಯದರ್ಶಿಗೆ ವಿಷಯವನ್ನು ತಿಳಿಸಿ ಅಲ್ಲಿಂದಲೂ ಅವಳನ್ನು ಓಡಿಸಿದೆ.......ತನಗಾದ ಅಪಮಾನವನ್ನು ತಡೆ ಯಲಾರದೆ ಆಕೆ ಆತ್ಮಹತ್ಯ ಮಾಡಿಕೊಂಡಳು .....ಅವಳು ಮಾಡಿದ ಪಾಪವೇ ಅವಳನ್ನು ಆ ಗತಿಗೆ ಮುಟ್ಟಿಸಿತು."

ಆಶಾ ಸುಧಾದೇವಿಯ ಮುಖಭಾವವನ್ನು ಪರೀಕ್ಷಿಸಿದಳು...... ಅದು ದೃಢವಾದ ನಿಷ್ಠೆಯ ಪ್ರತೀಕವಾಗಿತ್ತು. ಅವಳ ಆತ್ಮ, ಜೀವನ, ಪವಿತ್ರ ವಾದದ್ದು—ಕಳಂಕರಹಿತ—ಎಂದು ತೀರ್ಮಾನಿಸಿದಳು.

## ೭

ಆನಂದ ಮತ್ತೆ ಅಂಗಳದಲ್ಲಿ ಬಂದು ನಿಂತು ಸುತ್ತಲೂ ನೋಡಿದ.

ಧರ್ಮಸಿಂಗ್ ತಮ್ಮ ಸ್ಥಾನವನ್ನು ಬಿಟ್ಟು ಕದಲಿರಲಿಲ್ಲ. ಅವರು ಅರೆ ನಿದ್ರೆಯಲ್ಲಿದ್ದರು. ಸ್ವಲ್ಪ ದೂರದಲ್ಲಿ ಅಜಯ ಸಿಗರೇಟಿನ ಹೊಗೆ ಬಿಡುತ್ತಾ ಸಮುದ್ರದ ಕಡೆ ತಿರುಗಿ ನಿಂತಿದ್ದ. ಯಾರೊಡನೆಯಾದರೂ ಕುರಿತು ಪರಿಸ್ಥಿತಿ ಆಲೋಚಿಸಬೇಕೆನಿಸಿತು ಆನಂದನಿಗೆ. ಧರ್ಮಸಿಂಗ್‌ರವರೊಡನೆ ಕುರಿತು ಚರ್ಚಿಸುವುದು ಪ್ರಯೋಜನವಿಲ್ಲವೆಂದು ಹೇಳಿತು ಅವನ ಮನಸ್ಸು. ಅವರಿಗೆ ಆಗಲೇ ವಯಸ್ಸಾಗಿತ್ತು, ಉತ್ಸಾಹ ಕುಗ್ಗಿತ್ತು. ನೇರವಾಗಿ ಅಜಯನ ಬಳಿ ಬಂದು ನಿಂತ ಆನಂದ. ನಂತರ ಕೇಳಿದ:

"ಒಂದು ವಿಚಾರ—ನಿಮ್ಮ ಸಲಹೆ ಬೇಕಾಗಿದೆ"

"ನನ್ನ ಸಲಹೆ ?.... ನಾನೇನು ಡಾಕ್ಟರೇ?"

"ಪರಿಸ್ಥಿತಿಯನ್ನು ವಿವೇಚಿಸಬೇಕಾಗಿದೆ.... ನಿಮ್ಮ ಅಭಿಪ್ರಾಯವೇನು ?"

"ನನಗೇನೂ ಹೊಳೆಯುತ್ತಿಲ್ಲ. .... ಪರಿಸ್ಥಿತಿಬಗ್ಗೆ ನಾನೇನೂ ಯೋಚಿಸುತ್ತಿಲ್ಲ..........ದೋಣಿ ಯಾವಾಗ ಬರುತ್ತದೆಯೆಂದು ಎದುರು ನೋಡುತ್ತಿದ್ದೇನೆ"

"ಅದೇ ನಾನೂ ಕೇಳುತ್ತಿರುವುದು. ಶ್ಯಾಮಲಾಲ್ ಏಕೆ ಬರಲಿಲ್ಲ? ದಿನವೂ ಬರುತ್ತಿದ್ದವನಿಗೆ ಈ ದಿನ ಏನಾಯತು ? ಇನ್ನೊಂದು ವಿಚಾರ ....ಸರೋಜಳ ಮರಣದ ಬಗ್ಗೆ ಗೋವಿಂದನಾಯರ್‌ರವರ ಸಿದ್ಧಾಂತ ನಿಮಗೆ ಒಪ್ಪಿತೇ ?"

"ನಂಬಲು ಸಾಕಷ್ಟು ಕಾರಣಗಳೇನೋ ಇದೆ......ಆದರೆ?"

"ಆದರೆ .. ಏನು ?"

"ಆಗ ಆ ಆಪಾದನೆ ನಿಜವೆಂದು ನಂಬಬೇಕು......ಅದು ನಿಜವಾದರೆ ಬೇರೆಯುವರ ಮೇಲಿನವೂ ನಿಜವೇ ಎಂದು ತರ್ಕಿಸಬೇಕಾಗುತ್ತದೆ."

"ಶಿವರಾಮನ ವಿಷಯದಲ್ಲಿ ನನಗೂ ಅನುಮಾನವಿದೆ. ಸರೋಜಳ ಚರ್ಯೆ, ಶಿವರಾಮನ ಭಯಗ್ರಸ್ತ ಮುಖ ಇವೆಲ್ಲವನ್ನೂ ನೋಡಿದರೆ ಆಪಾದನೆ ನಿಜವಿರಲೇ ಬೇಕು. ಅದು ನಿಜವೆಂದ ಪಕ್ಷಕ್ಕೆ ಎಲ್ಲರದೂ

ನಿಜವಿರಬೇಕೆಂದು ಊಹಿಸ ಬಹುದೇ ಹೊರತು, ಅದು ಸಿದ್ಧಾಂತವಾಗುವುದಿಲ್ಲ........ಇದರಲ್ಲಿ ಇನ್ನೊಂದು ಸ್ವಾರಸ್ಯವಿದೆ..... . ಕೆಲವರ ಅಪರಾಧಗಳು ಕರ್ತವ್ಯದ ಹೆಸರಿನಲ್ಲಿ ನಡೆದಿದೆ. ಧರ್ಮಸಿಂಗ್ ಮರಣದಂಡನೆ ವಿಧಿಸಬೇಕಾಯಿತು. .... ಗೋವಿಂದನಾಯರ್ ಯುದ್ಧಕಾಲದಲ್ಲಿ ತಮ್ಮ ಸೇಡನ್ನು ತೀರಿಸಿಕೊಂಡಿರಬಹುದು."

"ರಘುವೀರನ ಕೇಸು ನನಗೆ ಸರಿಯಾಗಿ ಜ್ಞಾಪಕವಿದೆ. ಎಲ್ಲರೂ 'ಅವನ ಬಿಡುಗಡೆ ಖಂಡಿತ. ಜ್ಯೂರಿಗಳು ಅವನ ಕಡೆಗೆ ಒಲಿದಿದ್ದಾರೆ' ಎಂದು ನಂಬಿದ್ದರು. .. ಆದರೆ ಮಧ್ಯೆ ಧರ್ಮಸಿಂಗರ ಕೈವಾಡದಿಂದ ಅವನಿಗೆ ಶಿಕ್ಷೆಯಾಗಿರಬಹುದು ....."

ತಟಕ್ಕನೆ ಆನಂದನಿಗೆ ಹೊಳೆಯಿತು. ಆಸ್ಪತ್ರೆಯಲ್ಲಿ ಆಪರೇಷನ್ ಟೇಬಲ್ಲಿನ ಮೇಲೆ ಕೊಲೆ.........ಕರ್ತವ್ಯ.........ಚಿಕಿತ್ಸೆಯ ನೆಪದಲ್ಲಿ ಕಗ್ಗೊಲೆ........ಅವನ ಮೈ ನಡುಗಿತು .........

"ಆಪಾದನೆಗಳು ಹೇಗಾದರೂ ಇರಲಿ........ನಮ್ಮೆಲ್ಲರನ್ನೂ ಇಲ್ಲಿಗೆ ಕರೆಸಿದವನ ಉದ್ದೇಶ್ಯವಾದರೂ ಏನು ? ಏನೇ ಆಗಲಿ, ನಮ್ಮನ್ನು ಇಲ್ಲಿಗೆ ಆಹ್ವಾನಿಸಿ ಅವನು ಇದುವರೆವಿಗೂ ಬಾರದಿರುವುದಕ್ಕೆ ಕಾರಣವೇನು ? ... ಅಥವಾ ಇವತ್ತಾದರೂ ಬರಬಹುದೋ ?........" ಎಂದ ಆನಂದ.

"ನಿಮ್ಮ ಅಭಿಪ್ರಾಯವೇನು ?"

"ನಾನೇನೂ ಹೇಳಲಾರೆ....ಸದ್ಯಕ್ಕೆ ನಾವು ಸರೋಜಳ ಮರಣದ ವಿಷಯ ಸ್ವಲ್ಪ ಚರ್ಚಿಸೋಣ..... ಸಾವಿಗೆ ಎರಡು ಕಾರಣಗಳಿರಬಹುದು. ....ಶಿವರಾಮ ಗುಟ್ಟು ಬಯಲಾಗಬಹುದೆಂಬ ಭಯದಿಂದ ಅವಳನ್ನು ಮುಗಿಸಿರಬೇಕು..... ಅಥವಾ ಅವಳೇ ಆತ್ಮಹತ್ಯೆ ಮಾಡಿಕೊಂಡಿರಬಹುದು"

ಅಜಯ ತಲೆಯಲ್ಲಾಡಿಸಿ ಹೇಳಿದ, "ಆತ್ಮಹತ್ಯೆ ಎಂದರೆ ನಾನು ನಂಬಲಾರೆ... ....ಕಿರ್ಪಚಂದನ ಸಾವು ನಿನ್ನೆ ಸಂಭವಿಸದಿದ್ದರೆ....ಆದರೆ ಕೇವಲ ಹನ್ನೆರಡು ಘಂಟೆಗಳಲ್ಲಿ ಎರಡು ಆತ್ಮಹತ್ಯೆಗಳು ಎಂದರೆ ನಂಬುವುದು ಕಷ್ಟ."

"ಅಂದರೆ ಶಿವರಾಮನೇ ಅವಳನ್ನು ಕೊಂದಿರಬೇಕು........ಅಲ್ಲವೆ?"

"ಇರಬಹುದು. ಹಾಗೇ ಆಗಿರಬಹುದು........ದೃಢವಾದ ಮನಸ್ಸಿಲ್ಲದವರ ಕೈಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದೂ ಸಾಧ್ಯವಿಲ್ಲ...."

"ಹೋಗಲಿ....ಕಿಷನ್‌ಚಂದನ ವಿಷಯ....ಅದು ಆತ್ಮಹತ್ಯೆ ಇರಬಹುದೇ ?"

"ಸಂದರ್ಭ ಬಹಳ ಇಕ್ಕಟ್ಟಿನಲ್ಲಿದೆ. ಸರೋಜಳ ಅಕಾಲ ಮರಣ ಒದಗಿರದಿದ್ದರೆ ಹೇಗೋ ಕಿರ್ಷಚಂದನದು ಆತ್ಮಹತ್ಯೆ ಎಂದು ನಂಬಬಹುದಾಗಿತ್ತು.........ಅಥವ ಕಿರ್ಷಚಂದ್ ನಿನ್ನೆ ಆ ರೀತಿ ಸಾಯದಿದ್ದರೆ ಶಿವರಾಮನೇ ಸರೋಜಳನ್ನು ಕೊಲೆ ಮಾಡಿದ್ದಾನೆಂದು ನಿರ್ಧರಿಸಬಹುದಾಗಿತ್ತು.........ಕಿಷನ್‌ಚಂದ್‌ನಂತಹ ಯುವಕ....ಸದಾ ಸಂತೋಷಚಿತ್ತನಾಗಿದ್ದ ಅವನು, ಆತ್ಮಹತ್ಯೆ ಮಾಡಿಕೊಂಡ ಎಂದರೆ ನಂಬಲಸಾಧ್ಯ......"

"ಹಾಗಾದರೆ ?"

"ಅವನು ಕೊಲೆಯಾಗಿರಬೇಕೆಂದೇ ನನ್ನ ಭಾವನೆ" ಎಂದ ಅಜಯ.

"ನನಗೂ ಅದೇ ಸಂದೇಹವಿತ್ತು....ಈ ಬೆಳಗ್ಗೆ ನಡೆದ ಒಂದು ಘಟನೆ ಅದಕ್ಕೆ ಪುಷ್ಟಿ ಕೊಡುವಂತೆ ಇದೆ."

"ಏನದು ?"

"ಡೈನಿಂಗ್ ಹಾಲಿನಲ್ಲಿ ಒಂಬತ್ತು ಗೊಂಬೆಗಳಿರಲಿಲ್ಲವೇ ?"

"ಹೌದು"

"ಆದರೆ ನಿನ್ನೆ ರಾತ್ರಿ ಶಿವರಾಮು ನೋಡಿದಾಗ ಎಂಟೇ ಇದ್ದವಂತೆ.......ಈ ಬೆಳಿಗ್ಗೆ ಏಳೇ ಇವೆ."

"ಆದರೆ ಅದಕ್ಕೂ ಇಲ್ಲಿ ಸಂಭವಿಸಿರುವ ಮರಣಗಳಿಗೂ ಏನು ಸಂಬಂಧ ?" ಎಂದ ಅಜಯ, ಸೇದುತ್ತಿದ್ದ ಸಿಗರೇಟನ್ನು ಎಸೆದು.

"ನೇರವಾಗಿ ಸಂಬಂಧವಿಲ್ಲದಿದ್ದರೂ ಆಳವಾಗಿ ಆಲೋಚಿಸಿದರೆ ಅದರಲ್ಲಿ ರಹಸ್ಯವಿದೆ........ನಿನ್ನೆ ಒಂದು ಮರಣ—ಒಂದು ಗೊಂಬೆಯ ಮಾಯ. ಈದಿನ ಎರಡನೆಯ ಮರಣ....ಎರಡನೆಯ ಗೊಂಬೆಯ ಅದೃಶ್ಯ........"

''ನಮ್ಮನ್ನು ಇಲ್ಲಿಗೆ ಕರೆಸಿದವನು ಕಣ್ಣು ಮರೆಸಿಕೊಂಡು ನಮ್ಮನ್ನು ಆಟವಾಡಿಸುತ್ತಿದ್ದಾನೆಂದು ನಿಮ್ಮ ಅಭಿಪ್ರಾಯವೇ ?''

''ಹೌದು........ ಕಪಿಗಳ ಮಧ್ಯೆ ನಿಂತಿರುವ ಡೊಂಬರವನ ಗೊಂಬೆ ಅದನ್ನು ಸೂಚಿಸುತ್ತದೆ.''

''ಆದರೆ ಶಿವರಾಮು......ನಾವಿಷ್ಟು ಜನರ ಹೊರತು ಇಡೀ ದ್ವೀಪದಲ್ಲಿ ಬೇರೆ ಯಾರೂ ಇಲ್ಲ ಎನ್ನುತ್ತಾನಲ್ಲಾ ?''

''ಅವನಿಗೇ ಗೊತ್ತಿರಲಾರದು........ಅಥವಾ..... ಅವನೇ ಸುಳ್ಳಾಡುತ್ತಿರಬಹುದು.''

''ಹಾಗಾದರೆ ಶ್ಯಾಮಲಾಲ್ ಬಾರದಿರುವುದಕ್ಕೆ ಕಾರಣ ಈಗ ಖಚಿತವಾಯಿತು. ಮಾಥರ್ವ ತನ್ನ ಕೆಲಸ ಮುಗಿಸುವವರೆಗೂ ಹೊರಗಡೆಯಿಂದ ಯಾವ ಸಹಾಯವೂ ಸಿಗದಂತೆ ಏರ್ಪಾಡಾಗಿರಬೇಕು...........''

ಆನಂದ ಹೇಳಿದ, ''ಈಗಲೇ ದ್ವೀಪದ ಪರೀಕ್ಷೆಯಾಗಬೇಕು. ಇದು ಅಷ್ಟೇನೂ ದೊಡ್ಡದಾಗಿಲ್ಲ.....ಹೆಚ್ಚು ಮುಚ್ಚುಮರೆಗಳ ಜಾಗವಿಲ್ಲ........ ದೊಡ್ಡ ದೊಡ್ಡ ಮರಗಳೂ ಇಲ್ಲ. ಆದ್ದರಿಂದ ಪರೀಕ್ಷೆ ಅಷ್ಟೇನೂ ಕಷ್ಟವಾಗಲಾರದು.''

ಅಜಯನಿಗಾದರೂ ಅದು ಒಪ್ಪಿಗೆಯಾಯ್ತು. ಅವನೆಂದ, ''ಈ ಕಾರ್ಯದಲ್ಲಿ ಶಿವರಾಮನ ಸಹಾಯ ಪಡೆಯಬಹುದು........ಗೋವಿಂದ್, ಧರ್ಮಸಿಂಗ್ ಹೆಚ್ಚು ಕಷ್ಟ ಪಡಲಾರರು .. ನಾವು ಮೂವರೂ ಸೇರಿ ಒಂದಂಗುಲ ಜಾಗ ಬಿಡದಂತೆ ಈ ದ್ವೀಪವನ್ನು ಇವತ್ತೇ ಪರೀಕ್ಷಿಸಬೇಕು.''

## ೮

ಆನಂದ ಮತ್ತು ಅಜಯರು ಶಿವರಾಮುನನ್ನು ಸಹಾಯಕ್ಕೆ ಕರೆದುಕೊಂಡು ದ್ವೀಪವನ್ನು ಸುತ್ತಲು ಹೊರಟರು. ಸ್ವಲ್ಪ ಹೊತ್ತು ಮೌನವಾಗಿ ಮೂವರೂ ನಡೆದರು. ಮೌನ ಮುರಿದು ಶಿವರಾಮುನೆಂದ. ''ಇದು

ವ್ಯರ್ಥ.... ನಾನು ಇಡೀ ದ್ವೀಪವನ್ನು ಸುತ್ತಿ ಬಂದಿದ್ದೀನಿ. ನಾವು ಇಲ್ಲಿಗೆ ಬಂದ ದಿನ ಮಾಡಲು ಕೆಲಸವಿಲ್ಲದೆ ನಾನು ಎಲ್ಲಾ ಕಡೆಯೂ ಸುತ್ತಿಬಂದೆ." ಶಿವರಾಮನ ಮಾತನ್ನು ಒಪ್ಪದೆ ಅಜಯ, "ಇಲ್ಲ, ನೀನು ನೋಡದಿರುವ ಅಥವಾ ನೋಡಲು ಸಾಧ್ಯವಾಗದಿರುವ ಪ್ರದೇಶ ಇರಲೇಬೇಕು........ ಇಲ್ಲ ದಿದ್ದರೆ ಇಲ್ಲಿ ನಡೆಯುತ್ತಿರುವ ಘಟನೆಗಳಿಗೆ ಕಾರಣವೇ ಇಲ್ಲ" ಎಂದ. ಆನಂದ ಅವನ ಮಾತನ್ನೇ ಸಮರ್ಥನೆ ಮಾಡಿದ. ಶಿವರಾಮನಿಗೆ ಒಂದು ಸಂದೇಹ ಹೊಳೆಯಿತು. ಕೇಳಲು ಅವನಿಗೆ ಮೊದಲು ಧೈರ್ಯವಾಗದಿದ್ದರೂ ಕೇಳಿಬಿಟ್ಟ, "ಒಂದು ವೇಳೆ ಯಾರೇ ಆಗಲಿ ಇಲ್ಲಿ ಮರೆ ಮಾಚಿಕೊಂಡಿದ್ದಾನೆಂದು ಭಾವಿಸಿದರೂ, ಕಿರ್ಪಚಂದನ ಮರಣ ಹೇಗೆ ಸಂಭವಿಸಿತು ? ನಾವೆಲ್ಲಾ ಎದುರಿಗೇ ಇದ್ದೆವು...."

"ಆ ರಾತ್ರಿ ಅವನು ಅನೇಕ ಬಾರಿ ವ್ಹಿಸ್ಕಿ ಕುಡಿದ.... ನನಗೆ ನೆನಪಿರುವಂತೆ ಅವನು ಕೊನೆಯ ಬಾರಿ ಕುಡಿಯಲು ಹೋದಾಗ ಅವನ ಗ್ಲಾಸು ಕಿಟಕಿಯ ಪಕ್ಕದ ಮೇಜಿನ ಮೇಲಿತ್ತು. ಕಿಟಕಿಯ ಮೂಲಕ ಯಾರಾದರೂ ವಿಷ ಹಾಕಿರಬಹುದು" ಎಂದ ಆನಂದ.

"ಅದು ಹೇಗೆ ಸಾಧ್ಯ ?.... ನಮ್ಮಲ್ಲಿ ಯಾರ ಕಣ್ಣಿಗೂ ಬೀಳದಂತೆ ?"

"ನಮ್ಮ ಗಮನವೆಲ್ಲಾ ಆ ಧ್ವನಿ, ಆ ರಿಕಾರ್ಡು, ಆಪಾದನೆಗಳು ಇವುಗಳ ಕಡೆಗಿತ್ತು.... ಅಲ್ಲವೇ ?

"ಇರಬಹುದು" ಎಂದು ಸುಮ್ಮನಾದ ಶಿವರಾಮು.

"ಈಗ ನಾವು ಮಾಡುತ್ತಿರುವ ಕೆಲಸ ಬಹಳ ಅಪಾಯಕಾರಿಯಾದುದು.... ಅದೂ ಯಾವ ಆಯುಧಗಳೂ ಇಲ್ಲದೆ.... ನಿಮ್ಮ ಹತ್ತಿರ ರಿವಾಲ್ವರ್ ಏನಾದರೂ ಇದೆಯೇ?" ಆನಂದ ಕೇಳಿದ.

"ನನ್ನ ಹತ್ತಿರವಿದೆ."

ಅಜಯನ ಉತ್ತರದಿಂದ ಉಳಿದವರಿಬ್ಬರೂ ಚಕಿತರಾದರು. .......

'ಅರೆ! ಇವನು ರಿವಾಲ್ವರ್ ಏಕೆ ತರಬೇಕು?' ಎನಿಸಿತು ಅವರಿಗೆ.

"ಇದು ನಿಮ್ಮ ಅಭ್ಯಾಸವೇ ?" ಆನಂದನ ಪ್ರಶ್ನೆ.

"ಹೌದು....ಅಲ್ಲದೆ ಕಷ್ಟಕಾಲದಲ್ಲಿರಬೇಕು....ರಕ್ಷಣೆಗೆ"

* * * *

ಮೂವರೂ ಮತ್ತೆ ಸುತ್ತಲಾರಂಭಿಸಿದರು. ಒಂದು ಅಡಿ ಜಾಗ ಬಿಡದಂತೆ ಅವರು ಪರೀಕ್ಷಿಸತೊಡಗಿದರು. ದ್ವೀಪ ಅಷ್ಟೇನೂ ದೊಡ್ಡದಲ್ಲ. ಸಣ್ಣ ಗಿಡಮರಗಳು ಅಲ್ಲಲ್ಲಿ ಬೆಳೆದಿದ್ದವು. ಎಲ್ಲೂ ಗುಹೆಗಳಿರುವ ಲಕ್ಷಣ ಕಾಣಬರಲಿಲ್ಲ. ಇಡೀ ದ್ವೀಪವನ್ನೆಲ್ಲಾ ಸುತ್ತಿ ಕೊನೆಗೆ ಅವರು ಸಮುದ್ರದ ತೀರಕ್ಕೆ ಬಂದಿದ್ದರು. ಅಲ್ಲೇ ಇದ್ದ ಕಲ್ಲುಬಂಡೆಯಮೇಲೆ ಕೂತು ಗೋವಿಂದರ್ ಸಮುದ್ರವನ್ನೇ ದಿಟ್ಟಿಸಿ ನೋಡುತ್ತಿದ್ದರು. ತಾವು ಮೂರು ಜನ ಬಂದು ನಿಂತಿದ್ದರೂ ತಮ್ಮ ಕಡೆಗೆ ತಿರುಗದಿದ್ದುದನ್ನು ನೋಡಿ ಆನಂದ —

"ಕಡಲತೀರ ಬಹಳ ಸುಂದರವಾಗಿದೆ....ತಂಗಾಳಿ ಚೆನ್ನಾಗಿ ಬೀಸುತ್ತಿದೆಯಲ್ಲವೇ ?" ಎಂದ,

ಗೋವಿಂದರ್ ತಿರುಗಿ ನೋಡಿ, ಮತ್ತೆ ಸಮುದ್ರದ ಕಡೆಗೆ ತಿರುಗಿ ಹೇಳಿದರು:

"ದಯವಿಟ್ಟು ನನಗೆ ತೊಂದರೆ ಕೊಡಬೇಡಿ....ಯೋಚಿಸಲು ಅವಕಾಶ ಕೊಡಿ''

"ನಿಮಗೆ ತೊಂದರೆ ಕೊಡಲು ನಾವು ಬರಲಿಲ್ಲ....ದ್ವೀಪದಲ್ಲಿ ಅವಿತುಕೊಳ್ಳಲು ಎಲ್ಲಾದರೂ ಜಾಗವಿದೆಯೇ ಎಂದು ನೋಡುತ್ತಿದ್ದೇವೆ" ಎಂದ ಅಜಯ.

"ನಿಮ್ಮ ಕೆಲಸ ನಿಮಗಿರಲಿ.... ನನ್ನದು ನನಗಿರಲಿ...."

ಮತ್ತೆ ನಾಯರ್ ಅವರುಗಳನ್ನು ತಿರುಗಿಯೂ ನೋಡಲಿಲ್ಲ. ಅವರಿಗೆ ನಾಯರರ ಅಂದಿನ ಮನೋಭಾವ ಅರ್ಥವಾಗಲಿಲ್ಲ....ಅವರನ್ನು ಅಲ್ಲಿಯೇ ಬಿಟ್ಟು ಮುಂದೆ ನಡೆದರು.

ಪರೀಕ್ಷಿಸಬೇಕಾದುದ್ದು ಇನ್ನೇನೂ ಉಳಿಯಲಿಲ್ಲ. ಬಹಳ ಎಚ್ಚರಿಕೆಯಿಂದ ತಮ್ಮ ಕೆಲಸವನ್ನು ನಡೆಸಿದ್ದರು....ಈಗ ಅವರು ದ್ವೀಪದ

ಅತ್ಯಂತ ಎತ್ತರವಾದ ಪ್ರದೇಶದಲ್ಲಿ ನಿಂತಿದ್ದರು. ರಾಂಗಾಂವ್ ಅಸ್ಪಷ್ಟ ವಾಗಿ ಕಾಣುತ್ತಿತ್ತು.

ಅಜಯನೆಂದ, "ಈ ರಾತ್ರಿ ದೊಡ್ಡ ಬೆಂಕಿ ಹೊತ್ತಿಸಿ ರಾಂಗಾಂವ್ ಜನರ ಗಮನವನ್ನು ಸೆಳೆಯಬಹುದೆಂದು ನನಗೆ ತೋರುತ್ತದೆ.''

"ಬೆಂಕಿಯನ್ನೇನೋ ಹಚ್ಚಬಹುದು....ಆದರೆ ಅಲ್ಲಿನ ಜನರಿಗೆ ನಮ್ಮ ಪರಿಸ್ಥಿತಿ ತಿಳಿಯಬೇಕಲ್ಲಾ....." ಆನಂದ ಅನುಮಾನಿಸಿದ.

ಅಜಯನಿಗೆ ಉತ್ಸಾಹಭಂಗವಾಯ್ತು. ತಟಕ್ಕನೆ ಅವನ ದೃಷ್ಟಿ ಸಮೀಪದಲ್ಲಿನ ಇಳಿಜಾರು ಪ್ರದೇಶದ ಮೇಲೆ ಬಿತ್ತು. ಆನಂದನ ಕಡೆಗೆ ತಿರುಗಿ:

''ಈ ಮೂಲೆಯಲ್ಲಿ ಇಳಿಜಾರು ಬಹಳ ಕಡಿದಾಗಿದೆ....ನಾವು ಇದು ವರೆಗೂ ಅದನ್ನು ಪರೀಕ್ಷಿಸಲಿಲ್ಲ...ಅಲ್ಲಿ ಏನಾದರೂ ಗುಹೆ ಇದ್ದರೆ ...." ಎಂದ.

ಆನಂದ ಶಿವರಾಮನ ಕಡೆಗೆ ತಿರುಗಿ, "ಉದ್ದನೆಯ ಹಗ್ಗವೇನಾ ದರೂ ಇದೆಯೇ ಶಿವರಾಮ್ ಅಲ್ಲಿಳಿದು ನೋಡಬಹುದು. .." ಎಂದ. ಶಿವರಾಮ ತಲೆಯಲ್ಲಾಡಿಸುತ್ತಾ ಭವನದ ಕಡೆಗೆ ಸರಸರನೆ ಹೊರಟ. ಆನಂದ, ಅಜಯರು ಸಿಗರೇಟ್ ಹಚ್ಚಿದರು.

* * * *

ಆಶಾದೇವಿಗೆ ಬೆಳಗ್ಗಿನಿಂದಲೂ ಮನಸ್ಸಿನಲ್ಲಿ ಸಮಾಧಾನವಿರಲಿಲ್ಲ. ಸುಧಾಳೊಡನೆ ಮಾತಾಡಲು ಅವಳಿಗೆ ಇಷ್ಟವಾಗಲಿಲ್ಲ. ಅವಳಿಂದ ದೂರ ವಿದ್ದರೆ ವಾಸಿ ಎನಿಸುತ್ತಿತ್ತು. ಅವಳನ್ನು ಕಂಡರೆ ಒಂದು ರೀತಿ ಭಯ ವುಂಟಾಗುತ್ತಿತ್ತು. ಕೋಣೆಯಲ್ಲಿ ಕೂತಿರಲೂ ಬೇಸರವಾಗಿತ್ತು. ಏಕಾಂಗಿ ಯಾಗಿ ಉಳಿದರೆ ಒಂದು ಸ್ಪಷ್ಟವಾದ ಚಿತ್ರ ಅವಳ ಕಣ್ಣಿಗೆ ಕಟ್ಟುತ್ತಿತ್ತು. ....ಆಳವಾದ ನೀರು....ಆಗಾಗ್ಗೆ ಮುಳುಗಿ ಏಳುತ್ತಿರುವ ಒಬ್ಬ ಬಾಲಕನ ದಾರುಣ ಚಿತ್ರ....ಅಮ್ಮ, ಅಮ್ಮಾ! ಎಂದು ಕೂಗುವ ಆರ್ತನಾದ.... ಹೇಗಾದರೂ ಮಾಡಿ ಆ ಚಿತ್ರವನ್ನು ಮರೆಯಲು ಪ್ರಯತ್ನಿಸುತ್ತಿದ್ದಳು, ಅದಕ್ಕಾಗಿಯೇ ಅವಳು ಈಗ ಭವನದ ಮುಂದಿನ ಅಂಗಳದಲ್ಲಿ ಬಂದು ನಿಂತಳು. ಅಂಗಳದ ಮೂಲೆಯಲ್ಲಿ ಧರ್ಮಸಿಂಗ್ ಕತ್ತು ಬಗ್ಗಿಸಿ ಕುಳಿತಿ

ದ್ದರು..... ಗಾಢವಾದ ಯೋಚನೆಯಲ್ಲಿ ಮಗ್ನರಾಗಿದ್ದರು. ಬಹುಶಃ ರಘುವೀರನಿಗೆ ತಾವು ವಿಧಿಸಿದ ಶಿಕ್ಷೆಯನ್ನು ನೆನೆದು ಅವರಿಗಾಗಿ ಪಶ್ಚಾತ್ತಾಪ ಪಡುತ್ತಿರಬಹುದೇ? ....ಅಥವಾ ಸಹ್ಯದ ಬಂಧನದಿಂದ ಬಿಡುಗಡೆಯ ಮಾರ್ಗವನ್ನು ಯೋಚಿಸುತ್ತಿರಬಹುದೇ ? ಕಣ್ಣು ಮುಚ್ಚಿದ್ದರೂ ಅವರು ನಿದ್ರೆ ಮಾಡುತ್ತಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು.

ಅಂಗಳವನ್ನು ದಾಟಿ ಆಶಾದೇವಿ ಕೆಳಗೆ ಇಳಿಯತೊಡಗಿದಳು. .. ಇಳಿದು ಅವಳು ಸಮುದ್ರತೀರದ ಮರಳುದಂಡೆಯಮೇಲೆ ಬಂದಳು. ಸ್ವಲ್ಪ ದೂರದಲ್ಲಿ ಗೋವಿಂದನಾಯರ್ ಕುಳಿತಿದ್ದರು. ಅವರೊಡನೆಯಾದರೂ ಹರಟೆ ಹೊಡೆಯಬೇಕೆಂದುಕೊಂಡು ಅವರ ಸಮೀಪಕ್ಕೆ ಬಂದಳು. ಬರುತ್ತಿದ್ದಂತೆಯೇ ನಾಯರ್—

"ಓಹೋ..... ನೀವೋ ಬನ್ನಿ" ಎಂದರು.

"ಅದೇನು ಏಕಾಂಗಿಯಾಗಿ ಕುಳಿತುಬಿಟ್ಟಿರಿ ?"

"ಇಲ್ಲಿನ ವಾತಾವರಣ ಶಾಂತವಾಗಿದೆ ....ಕಾಯುವುದಕ್ಕೆ ಪ್ರಶಸ್ತವಾದ ಸ್ಥಳ."

"ಕಾಯುವುದಕ್ಕೆ ?...... ಏನು ದೋಣಿಗಾಗಿ ಕಾಯುವುದಕ್ಕೋ?"

ನಾಯರ್ ನಕ್ಕು ನುಡಿದರು, "ದೋಣಿ ..ಅದೊಂದು ಹುಚ್ಚು ! ನಾನು ಕಾಯುತ್ತಿರುವುದು ದೋಣಿಗಾಗಲ್ಲ ..ನನ್ನ ಅಂತ್ಯವನ್ನು"

"ಅಂತ್ಯ !....ಇದೇನು ಹೀಗೆ ಮಾತನಾಡುತ್ತಿದ್ದೀರಿ ?"

"ಯಾಕೆ ನನ್ನಬುದ್ಧಿ ಸರಿಯಾಗಿಲ್ಲವೆಂದು ತಿಳಿದಿದ್ದೀರೇನು? ಹಾಗೇನೂ ಇಲ್ಲ ... ಎಲ್ಲವನ್ನೂ ದೀರ್ಘವಾಗಿ ಆಲೋಚಿಸಿದ್ದೇನೆ ...ನಮ್ಮಲ್ಲಿ ಒಬ್ಬರೂ ಈ ದ್ವೀಪವನ್ನು ಬಿಟ್ಟು ಹೋಗುವುದಿಲ್ಲ........ಇದು ಖಂಡಿತ"

ಆಶಾ ನಡುಗಿದಳು.... "ಇದೇಕೆ ಹೀಗೆ ಮಾತನಾಡುತ್ತಿದ್ದಾರೆ ? ಅಂತ್ಯವೆಂದರೇನು?........ಅದೂ ಕಾರಣವಿಲ್ಲದೆ ....ಇಬ್ಬರು ಸತ್ತರೆಂದರೆ, ಎಲ್ಲರೂ ಏಕೆ ಸಾಯಬೇಕು ? ಇಂದಲ್ಲ ನಾಳೆ ದೋಣಿ ಬಂದೇ ಬರುತ್ತದೆ .......ಇಲ್ಲಿಂದ ಹೊರಡುವುದು ಅಸಾಧ್ಯವೇಕೆ ?'' ಎಂದು, ಯೋಚಿಸತೊಡಗಿದಳು. ಮತ್ತೆ ನಾಯರ್ ನುಡಿದರು, "ಏಕೆ......... ಇದು

ವರೆವಿಗೂ ನಿಮಗೆ ತಿಳಿಯಲಿಲ್ಲವೇ..........ಆಶಾದೇವಿ ? ಅಥವಾ ತಿಳಿದೂ ಇದರಿಂದ ಬಿಡುಗಡೆಯ ಮಾರ್ಗ ಹೊಳೆದಿಲ್ಲದಿರಬಹುದು ಅಲ್ಲವೇ ?"

ಆಶಾ ಮಾತನಾಡಲಿಲ್ಲ.

"ಕುಮುದಾ .......ಕುಮುದಾ.........." ಎಂದು ಗೊಣಗುಟ್ಟಿದರು ನಾಯರ್.

"ಕುಮುದ !........ಯಾರು ಕುಮುದಾ ?"

"ಕುಮುದ ನನ್ನ ಪ್ರೀತಿಪಾತ್ರಳಾದ ಹೆಂಡತಿ........ಅವಳೇ ನನ್ನ ಸರ್ವಸ್ವವಾಗಿದ್ದಳು. ಅವಳನ್ನು ನಾನು ಕಳೆದುಕೊಂಡೆ........ಅವಳಿಗಾಗಿ ಏನನ್ನಾದರೂ ಮಾಡಲು ನಾನು ಸಿದ್ಧನಿದ್ದೆ........ಆದುದರಿಂದಲೇ ಆ ಕೆಲಸ ಮಾಡಿದೆ."

"ಯಾವ ಕೆಲಸ ?"

"ಮುಚ್ಚುಮರೆಯೇಕೆ ಆಶಾ..........ಅದೂ ಈ ನನ್ನ ಅಂತ್ಯ ಸಮಯದಲ್ಲಿ. ಕೃಷ್ಣಸಿಂಗ್ ನನ್ನ ನೆಚ್ಚಿನ ಮಿತ್ರನಾಗಿದ್ದ. ನಿಜ. ಆದರೆ ಅವನು ನನಗೇ ಮೋಸಮಾಡಿದ...... ನನ್ನ ಕುಮುದಳನ್ನು ಅಪಹರಿಸಲು ಯತ್ನಿಸಿದ.........ಸೇಡನ್ನು ತೀರಿಸಿಕೊಳ್ಳುವುದು ನನ್ನ ಆಗಿನ ಕರ್ತವ್ಯವಾಗಿತ್ತು. ನನ್ನ ಸೇಡು ತೀರಿತು. ಯುದ್ಧಕಾಲದಲ್ಲಿ ನನಗೆ ಸರಿಯಾದ ಅವಕಾಶ ದೊರಕಿತು. ಇದು ಅವಳಿಗೆ ಪ್ರಿಯವೋ, ಅಪ್ರಿಯವೋ ನಾನು ಹೇಳಲಾರೆ . ...."

ಆಶಾ ಕ್ಷಣಕಾಲ ಮೌನವಾಗಿದ್ದು, ನಂತರ ನುಡಿದಳು, "ಹೊರಡೋಣ ಬನ್ನಿ. ಛಳಿ ಹೆಚ್ಚಾಯಿತು. ಮಳೆ ಬೇರೆ ಬರುವಂತಿದೆ"

ಅಲುಗಾಡದೆ ನುಡಿದರು ನಾಯರ್ "ಇಲ್ಲ, ನಾನು ಈ ಪ್ರಶಾಂತ ವಾತಾವರಣವನ್ನು ಬಿಟ್ಟು ಬರಲಾರೆ.........ನನಗೆ ಈಗ ಬೇಕಾಗಿರುವುದು ಶಾಂತಿ, ಅನಂತ ಶಾಂತಿ.........."

* * * *

ಶಿವರಾಮು ಹಗ್ಗದೊಡನೆ ಹಿಂದಿರುಗಿದಾಗ ಆನಂದನೊಬ್ಬನೇ ನಿಂತಿದ್ದ. ಅಜಯ ಅವನ ಬಳಿ ಕಾಣಲಿಲ್ಲ. ಶಿವರಾಮು ಹತ್ತಿರಕ್ಕೆ ಬರು

ತ್ತಲೇ "ಅಜಯಕುಮಾರ್ ಎಲ್ಲಿ?" ಎಂದ. ಅವನಧ್ವನಿಯಲ್ಲಿ ಸಂದೇಹವಡಗಿತ್ತು. "ಆ ಕೊರಕಲಿಗೆ ಇಳಿಯಲು ಸರಿಯಾದ ಜಾಗವನ್ನು ಹುಡುಕಿಕೊಂಡು ಬರಲು ಹೋಗಿದ್ದಾನೆ........ಇನ್ನೇನು ಬರಬಹುದು."

ಶಿವರಾಮ ಮೆಲ್ಲನೆ ಉಸಿರಿದ. "ನೀವೆಷ್ಟೇ ಧೈರ್ಯ ಹೇಳಿ, ನನಗಂತೂ ಬಹಳ ಯೋಚನೆಯಾಗಿದೆ........ಇಲ್ಲಿನ ಪರಿಸ್ಥಿತಿ ಚೆನ್ನಾಗಿಲ್ಲ."

"ಎಲ್ಲರ ಗತಿಯೂ ಅಷ್ಟೇ. ಯಾರಿಗೆ ತಾನೇ ಧೈರ್ಯವಿದೆ ? ಒಬ್ಬರಿಗೊಬ್ಬರು ಧೈರ್ಯ ಹೇಳಬೇಕಾಗಿದೆ."

"ಗೋವಿಂದನಾಯರ್ ಹೇಳಿದ ಮಾತುಗಳನ್ನು ಕೇಳಿದರೆ ಯಾಕೋ ನನಗೆ ಅನುಮಾನವಾಗುತ್ತಿದೆ ........ಅವರ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ನಾನೇನೂ ಸೈಕಾಲಜಿಸ್ಟ್ ಅಲ್ಲ. ಇನ್ನೊಬ್ಬರ ಮನೋಭಾವನೆಯನ್ನು ತಿಳಿಯುವುದು ಅಷ್ಟೇನೂ ಸುಲಭವಲ್ಲ."

ಅಜಯ ತೃಪ್ತಿಯ ನಗೆ ಸೂಸುತ್ತಾ ಅವರ ಬಳಿಗೆ ಬಂದು, "ಈಕಡೆ ಮೂಲೆಯಲ್ಲಿ ಹೆಚ್ಚು ಆಳವಿಲ್ಲ........ಮೂವತ್ತಡಿ ಇರಬಹುದು....ಹಗ್ಗ ಹಾಕಿ ನೋಡೋಣ" ಎಂದ. ಹಗ್ಗ ಸುಮಾರು ನಲವತ್ತು ಅಡಿ ಉದ್ದವಿತ್ತು. ಮೂವರೂ ತಿಟ್ಟಿನ ತುದಿಗೆ ಹೋದರು. ಹಗ್ಗವನ್ನು ಇಳಿಬಿಟ್ಟು, ಆನಂದ, ಶಿವರಾಮ ತುದಿಯನ್ನು ಹಿಡಿದು ನಿಂತರು. ಅಜಯ ಸರಸರನೆ ಹಗ್ಗವನ್ನು ಹಿಡಿದು ಇಳಿದು ಹೋದ.

"ನೋಡಿದಿರಾ ಅವರು......ಇಳಿದರೀತಿ .. ....ಒಳ್ಳೆಯ ಸಾಹಸಿ ನನಗಂತೂ .........ಅವರನ್ನು ನಂಬುವಂತಿಲ್ಲ. ಒಂದು ವಿಚಾರ, ಇಲ್ಲಿಗೆ ಬರುವಾಗ ನೀವು ರಿವಾಲ್ವರ್ ತಂದಿರಾ ?"

"ಇಲ್ಲ, ನಾನೇಕೆ ತರಬೇಕು ?"

"ಹಾಗಾದರೆ ಅವರೇಕೆ ತರಬೇಕು ?"

"ಅಭ್ಯಾಸ ಬಲ"

"ನಾನೂ ಹಲವಾರು ಅಭ್ಯಾಸಗಳನ್ನು ನೋಡಿದ್ದೀನಿ. ಆದರೆ ರಿವಾಲ್ವರ್ ಹೊಂದಿರುವುದು ಕೇವಲ ಕಥೆಗಳಲ್ಲಿ"

ಆನಂದ ಮರುಮಾತಾಡದೆ ಯೋಚನಾಪರನಾದ. ಕೆಲವೇ ನಿಮಿಷ ಗಳಲ್ಲಿ ಅಜಯ ಮೇಲೇರಿ ಬಂದು "ಸರಿ, ಅಲ್ಲೇನೂ ಇಲ್ಲ.......... ಇನ್ನು ಳಿದಿರುವುದು ಭವನದ ಶೋಧನೆ........ಅಲ್ಲಿಗೆ ನಮ್ಮ ಕೆಲಸ ಮುಗಿದಂತಾ ಗುತ್ತದೆ'' ಎಂದ.

ಮೂವರೂ ಭವನಕ್ಕೆ ಹಿಂತಿರುಗಿದರು. ಭವನ ಎಷ್ಟೇ ವಿಶಾಲ ವಾಗಿದ್ದರೂ ಅವರಿಗೆ ಅದನ್ನು ಪರೀಕ್ಷಿಸುವ ಕೆಲಸ ಕಷ್ಟವಾಗಲಿಲ್ಲ. ಎಲ್ಲಾ ಕೋಣೆಗಳನ್ನು ಒಂದೊಂದಾಗಿ ಪರೀಕ್ಷಿಸಿದರು. ಕೋಣೆಗಳ ಬೀರುಗಳನ್ನೂ ಬಿಡಲಿಲ್ಲ. ಅಡಿಗೆಮನೆ, ಬಚ್ಚಲುಮನೆ, ಉಗ್ರಾಣ ಎಲ್ಲವನ್ನೂ ಮುಗಿಸಿ ದರು. ಹಿಂದಿನ ಅಂಗಳದಲ್ಲಿ ಕೆಲವು ಔಟ್‌ಹೌಸ್‌ಗಳಿದ್ದವು. ಅವೂ ಅವರ ಪರೀಕ್ಷೆಗೆ ಒಳಗಾದವು. ನೆಲಮಾಳಿಗೆಗಳೇನಾದರೂ ಇದೆಯೇ ಎಂದು ಪರೀಕ್ಷಿಸಿದರು. ಅವೂ ಕಂಡುಬರಲಿಲ್ಲ ಕೊನೆಗೆ ಮೂವರೂ ಮತ್ತೆ ಡ್ರಾಯಿಂಗ್ ರೂಮಿನಲ್ಲಿ ಬಂದು ನಿಂತರು. ಅಜಯ ಎಂದ : "ನಮ್ಮ ಶೋಧನೆ ಮುಗಿದಂತಾಯ್ತು... ....ನಾವು ಏಳು ಜನರ ಹೊರತು ಈ ದ್ವೀಪದಲ್ಲಿ ಮತ್ಯಾರೂ ಇಲ್ಲ.........ಇರಲು ಸಾಧ್ಯವೂ ಇಲ್ಲ.''

*     *     *     *

೯

ಧರ್ಮಸಿಂಗ್ ಡ್ರಾಯಿಂಗ್‌ರೂಮನ್ನು ಪ್ರವೇಶಿಸಿ ಅಜಯ, ಆನಂ ದರು ಇದ್ದಲ್ಲಿಗೆ ಬಂದರು. ಶಿವರಾಮು ತನ್ನ ಕೆಲಸಗಳಿಗಾಗಿ ಒಳಗೆ ಹೊರಟುಹೋದ. ಧರ್ಮಸಿಂಗರ ಕಡೆಗೆ ತಿರುಗಿ ಅಜಯ ಹೇಳಿದ, "ನಮ್ಮ ಕಲ್ಪನೆಗಳೆಲ್ಲಾ ಕೇವಲ ಭ್ರಾಂತಿಮಯ.......... ಆಕಸ್ಮಿಕವಾಗಿ ಸಂಭವಿಸಿದ ಎರಡು ಮರಣಗಳಿಂದ ನಮ್ಮ ಮನಸ್ಸು ಸಂದೇಹಕ್ಕೊಳ ಗಾಗಿದೆ. ಈ ದ್ವೀಪದ ಮೇಲೆ ನಮ್ಮ ಹೊರತು ಮತ್ಯಾರೂ ಇಲ್ಲವೆಂದು ಈಗ ತಾನೇ ನಿರ್ಧರಿಸಲಾಗಿದೆ. ಅಂದಮೇಲೆ...."

ಆನಂದ "ತರ್ಕ ಮಾಡಿದರೆ ನೀವು ಹೇಳುವುದು ನಿಜವೆ.....ಆದರೆ ಎರಡು ಮರಣಗಳು ಆಕಸ್ಮಿಕವಲ್ಲ. ಆತ್ಮಹತ್ಯೆಯ ರೀತಿಯೇ ಬೇರೆ....

ಕಿಷನ್ ಚಂದನದು ಆತ್ಮಹತ್ಯೆಯಲ್ಲ. ಡಾಕ್ಟರಾದ ನನಗೆ ಅಷ್ಟೂ ಅರ್ಥವಾಗುವುದಿಲ್ಲವೇ ?"

"ಕಿಷನ್ ಚಂದನದು ಹಾಗಿರಲಿ, ಸರೋಜಮ್ಮನ ವಿಷಯ?" ಎಂದರು ಧರ್ಮಸಿಂಗ್.

"ಅದು ಆತ್ಮಹತ್ಯೆಯಿದ್ದರೂ ಇರಬಹುದು."

"ಛೆ ! ಅದು ಆತ್ಮಹತ್ಯೆಯಲ್ಲ. ಆಕಸ್ಮಿಕವೆಂದು ನನ್ನ ಊಹೆ."

"ಅಂದರೆ ?"

ಅಜಯ ಬಾಯಿಬಿಡಲು ಹಿಂಜರಿದ. ಆನಂದ, ಧರ್ಮಸಿಂಗರು ಒತ್ತಾಯ ಪಡಿಸಿದ ಮೇಲೆ ಹೇಳಿದ. "ನೀವು ನಿನ್ನೆರಾತ್ರಿ ಅವಳಿಗೆ ಏನೋ ಔಷಧಿ ಕೊಟ್ಟಿರಿ. ಅಲ್ಲವೇ ?"

ಆನಂದನ ಮುಖ ಕೆಂಪೇರಿತು. ಆದರೂ "ಹೌದು, ಕೊಟ್ಟೆ" ಎಂದ.

"ನೀವು ಕೊಟ್ಟ ಔಷಧಿ ಯಾವುದು?"

ಆನಂದನ ಕೋಪ ಮಿತಿಮೀರಿತು. ಅವನು ರೇಗಿ ಬಿದ್ದ "ಛೆ! ನಿಮ್ಮ ಅನುಮಾನ ಕಾರಣವಿಲ್ಲದ್ದು......ಅದು ಕೇವಲ ನಿದ್ದೆ ಬರಲು ಕೊಡುವ ಔಷಧಿ."

"ಒಂದು ವೇಳೆ ಕೈತಪ್ಪಿ ಡೋಸ್ ಹೆಚ್ಚಾಗಿ, ಅನಾಹುತವಾಗಿರಬಹುದೇ ?" ಎಂದರು ಧರ್ಮಸಿಂಗ್.

ಆನಂದ ನಡುಗುವ ಧ್ವನಿಯಲ್ಲಿ ಹೇಳಿದ "ಈ ರೀತಿ ನಮ್ಮನಮ್ಮಲ್ಲೇ ಸಂದೇಹ ಪಡುವುದರಿಂದ ಪ್ರಯೋಜನವಿಲ್ಲ....ಡಾಕ್ಟರ್ ಆ ರೀತಿಯ ತಪ್ಪುಗಳನ್ನು ಮಾಡುತ್ತಾ ಹೋದರೆ ಪ್ರಪಂಚವೇ ನಾಶವಾದೀತು. ಈ ನಿಮ್ಮ ವಾದ ಹಾಸ್ಯಾಸ್ಪದ........"

ಆದರೂ ಅಜಯನ ಸಂದೇಹ ಬದಲಾಗಲಿಲ್ಲ.

ಅವರ ವಾಗ್ಯುದ್ಧದಿಂದ ಭಯಗೊಂಡ ಧರ್ಮಸಿಂಗ್, "ಅಜಯ್, ನಮ್ಮೆಲ್ಲರ ಸ್ಥಿತಿಯೂ ಒಂದೇ ಆಗಿದೆ. ಅವರ ಮೇಲೆ ಸಂದೇಹ ಪಡುವುದು ಸರಿಯಲ್ಲ. ಇಲ್ಲಿ ವೈಯಕ್ತಿಕ ದ್ವೇಷಕ್ಕೆ ಎಡೆಗೊಡಬಾರದು. ಹಾಗೆ ನೋಡಿ

ದರೆ ಈಕೆಲಸಕ್ಕೆ ಡಾಕ್ಟರೇ ಆಗಬೇಕಾಗಿಲ್ಲ.... ನಿಮ್ಮ ಮೇಲೆ ಸಂದೇಹ ಪಟ್ಟರೆ ?" ಎಂದರು.

"ನನ್ನ ಮೇಲೆ ಸಂದೇಹವೇ ?........ಕಾರಣ ?"

ಆನಂದ ಈ ಸಂದರ್ಭವನ್ನು ಬಳಸಿಕೊಂಡು, "ಕಾರಣವಿದೆ... .... ವಾದಕ್ಕಾಗಿ ಕೇಳುತ್ತೇನೆ........ನೀವು ರಿವಾಲ್ವರ್ ತರಲು ಕಾರಣ ವೇನು ?"

ಧರ್ಮಸಿಂಗ್ ಚಕಿತರಾಗಿ ಆನಂದನ ಕಡೆಗೆ ಕಣ್ಣಾಡಿಸಿ ನೋಡಿದರು.

ಆನಂದ "ಅಜಯ ಇಲ್ಲಿಗೆ ಬರುವಾಗ ರಿವಾಲ್ವರ್ ಒಂದನ್ನು ತಂದಿದ್ದಾರೆ.......ಆ ವಿಷಯ ಈ ಬೆಳಗ್ಗೆ ತಿಳಿಯಿತು" ಎಂದ.

ಸಿಂಗ್ ಪ್ರಶ್ನಾರ್ಥಕವಾಗಿ ಅಜಯನನ್ನು ನೋಡಿದರು. ಅವನು ಮೆಲ್ಲನೆ ನಕ್ಕು ನುಡಿದ, "ಅದನ್ನು ತರಲು ಕಾರಣವಿದೆ. ಕಷ್ಟಕಾಲದಲ್ಲಿ ರಕ್ಷಣೆ ಇರಬೇಡವೇ ? ಸಾಹಸದ ಕಾರ್ಯದಲ್ಲಿ ಭಾಗವಹಿಸಲೆಂದೇ ಮಾಧವನ್ ನನ್ನನ್ನು ಆಹ್ವಾನಿಸಿದ್ದರು....."

"ಈ ವಿಷಯ ನೀವು ನಿನ್ನೆರಾತ್ರೆ ಏಕೆ ಹೇಳಲಿಲ್ಲ ?"

"ನಿನ್ನೆಯ ಪರಿಸ್ಥಿತಿ ಇಷ್ಟು ವಿಷಮಿಸಿರಲಿಲ್ಲ. ಪರಸ್ಪರ ಸಂದೇಹ ಆರಂಭವಾಗಿರಲಿಲ್ಲ..........ನನ್ನ ಬಗ್ಗೆ ಈಗಿನ ನಿಮ್ಮ ಸಂದೇಹಕ್ಕೆ ವಿಷಾದಿಸಬೇಕು." ಅಜಯನ ಮಾತುಗಳು ಪ್ರಾಮಾಣಿಕ ಮನಃಪೂರ್ವಕವಾಗಿದ್ದವು. ಅದರಲ್ಲಿ ಯಾವ ಕೃತ್ರಿಮವೂ ಇರಲಿಲ್ಲ.

ಆನಂದ ಕೇಳಿದ. "ಸಾಹಸಕಾರ್ಯವೆಂದರಲ್ಲಾ.... ಯಾವ ಸಾಹಸ ಕಾರ್ಯ ?"

"ಅದರ ವಿವರಗಳು ನನಗೆ ತಿಳಿದಿರಲಿಲ್ಲ........ರಾಮದಾಸ್ ಎಂಬುವನು ನನ್ನ ಬಳಿಗೆ ಬಂದು ಮಾಧವನ್‌ರವರ ಆಹ್ವಾನವನ್ನು ತಿಳಿಸಿಹೋದ. ಎರಡು ಸಾವಿರ ರುಪಾಯಿಗಳ ಆಸೆಗಾಗಿ ನಾನು ಇಲ್ಲಿಗೆ ಬಂದೆ. ಈಗ ನನಗೆನಿಸುತ್ತಿದೆ. ಆ ಎರಡು ಸಾವಿರ, ನನ್ನನ್ನು ಬಲೆಗೆ ಹಾಕಿಕೊಳ್ಳಲು ತೋರಿಸಿದ ಕನ್ನಡಿಯ ಗಂಟು ಎಂದು"

"ಈ ದ್ವೀಪ ನಮ್ಮ ಬಲೆಯೆಂದು ನಿಮ್ಮ ಅಭಿಪ್ರಾಯವೇ ?"

"ನನಗಂತೂ ಹಾಗೆಯೇ ತೋರುತ್ತಿದೆ..........ಇಲ್ಲಿನ ಎರಡು ಮರಣ ಗಳು ....ಇಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ನೋಡಿದರೆ ಇವೆಲ್ಲಾ ಮಾಧವನ್‌ರವರ ಕೈವಾಡವೆನ್ನಿಸುತ್ತದೆ....ಆದರೆ ಅವನಾರು .... ಎಲ್ಲಿದ್ದಾ ನೆಂಬುದೇ ನಮ್ಮ ಸಮಸ್ಯೆಯಾಗಿದೆ...."

ಊಟದ ಹೊತ್ತನ್ನು ಸೂಚಿಸುವ ಘಂಟೆಯ ನಾದ ಅಲೆಯಲೆಯಾಗಿ ಕೇಳಿಬಂತು

* * * *

ಮೂವರೂ ಡೈನಿಂಗ್ ಹಾಲಿಗೆ ಬರುವ ಹೊತ್ತಿಗೆ ಶಿವರಾಮು ಅವರಿಗಾಗಿ ಬಾಗಿಲ ಬಳಿ ಕಾಯುತ್ತಿದ್ದ. ಒಳಗಡೆ ಮೇಜಿನ ಮೇಲೆ ಭೋಜನದ ಸಾಧನಗಳು ಸಿದ್ಧವಾಗಿದ್ದವು. ಸುಧಾ, ಆಶಾ ಹರಟೆ ಹೊಡೆಯುತ್ತಿದ್ದರು. ಗೋವಿಂದನಾಯರ್ ಇನ್ನೂ ಬಂದಿರಲಿಲ್ಲ. ಎದುರುಗೊಂಡ ಶಿವರಾಮುನನ್ನು ಧರ್ಮಸಿಂಗ್ ಕೇಳಿದರು.

"ಶ್ಯಾಮಲಾಲ್ ಬಂದನೇ ?"

"ಇಲ್ಲ, ಇನ್ನೂ ಬಂದಿಲ್ಲ. ಕಾರಣ ತಿಳಿಯದು" ಎಂದು ಒಳಗೆ ನಡೆದ ಶಿವರಾಮು. ಧರ್ಮಸಿಂಗ್ ಯೋಚನಾಪರರಾಗಿ ಒಳಹೊಕ್ಕರು. ಆನಂದ, ಅಜಯರು ಅವರನ್ನು ಹಿಂಬಾಲಿಸಿದರು. ಎಲ್ಲರೂ ಮೇಜಿನ ಸುತ್ತ ಕುಳಿತರು. ಅಜಯ ಕೇಳಿದ,

"ಗೋವಿಂದನಾಯರ್ ಎಲ್ಲಿ ?....ಅವರೂ ಬರಲಿ."

"ಅಂದ ಹಾಗೆ ಅವರಿಗೆ ಘಂಟೆಯ ಶಬ್ದ ಕೇಳಿಸಿತೋ ಇಲ್ಲವೋ ..... ಸಮುದ್ರದ ತೀರದಲ್ಲಿ ಕುಳಿತಿದ್ದರು" ಎಂದಳು ಆಶಾ.

"ನೀವು ಊಟ ಆರಂಭಿಸಿ....ನಾನು ಹೋಗಿ ಕರೆದುಕೊಂಡು ಬರುತ್ತೇನೆ" ಎಂದ ಶಿವರಾಮು.

ಆನಂದ ಸರಕ್ಕನೆ ಎದ್ದು, "ನೀನು ಬಡಿಸುತ್ತಿರು......ನಾನು ಹೋಗಿ ಕರೆದುಬರುತ್ತೇನೆ" ಎಂದು ಹೇಳಿ ಹೊರಟ.

* * * *

ಶಿವರಾಮು ಬಡಿಸತೊಡಗಿದ. ಅಡಿಗೆ ರುಚಿಯಾಗಿತ್ತು. ಯಾರೂ

ಮಾತನಾಡಲಿಲ್ಲ. ಏನು ಮಾತಾಡಬೇಕೆಂದು ಅವರಿಗೆ ತೋಚಲೂ ಇಲ್ಲ.

ಆಶಾ ಮೌನವನ್ನು ಭೇದಿಸಿ "ಗಾಳಿ ಜೋರಾಗಿದೆ, ಮೋಡ ಕವಿಯುತ್ತಾ ಇದೆ .ಮಳೆ ಬಂದರೂ ಬರಬಹುದು" ಎಂದಳು.

ಬಡಿಸುತ್ತಿದ್ದ ಶಿವರಾಮು ಹಾಗೇ ಸ್ತಬ್ಧನಾಗಿ ನಿಂತು. "ಯಾರೋ ಓಡಿಬರುವಂತಿದೆ" ಎಂದ.

ಎಲ್ಲರೂ ಕಿವಿಗೊಟ್ಟು ಕೇಳಿದರು. ಹೊರ ಬಂಗಳೆಯ ಗಾರೆಯ ಮೇಲೆ ಹೆಜ್ಜೆಗಳ ಶಬ್ದ ಬರಬರುತ್ತ ಸ್ಪಷ್ಟವಾಯಿತು. ಎಲ್ಲರೂ ಬಾಗಿಲ ಕಡೆ ತಿರುಗಿ ನೋಡಿದರು. ಆನಂದ ಓಡಿ ಬಂದು ನಿಂತಿದ್ದ. ಅವನಿಗೆ ಮೇಲುಸಿರು ಬರುತ್ತಿತ್ತು.

"ಗೋವಿಂದ ನಾಯರ್...." ಆನಂದ ವಾಕ್ಯ ಪೂರ್ಣಮಾಡುವುದರಲ್ಲಿ ಎಲ್ಲರೂ ಒಂದೇ ವಿಷಯವನ್ನು ಊಹಿಸಿದ್ದರು. ಅದು ನಿಜವಾಗಿತ್ತು. "...........ಸತ್ತುಬಿದ್ದಿದ್ದಾರೆ"

ಆರು ಜನರೂ ಭಯಗ್ರಸ್ತ ನೋಟದಿಂದ ಪರಸ್ಪರ ದಿಟ್ಟಿಸಿ ನೋಡಿದರು.

* * * *

ನಾಯರರ ದೇಹವನ್ನು ಒಳಕ್ಕೆ ಸಾಗಿಸುವ ಹೊತ್ತಿಗೆ ಮಳೆ ಹೊಡೆತ ಆರಂಭವಾಯಿತು. ಮಳೆ, ಸಿಡಿಲ ಗುಡುಗುಗಳ ಅರ್ಭಟ. ಆನಂದ ಅಜಯರು ಅವರ ದೇಹವನ್ನು ಮೇಲಕ್ಕೆ ಅವರ ಕೋಣೆಗೆ ಸಾಗಿಸಿದರು. ಉಳಿದವರೆಲ್ಲರೂ ಹಾಲಿನಲ್ಲಿ ನಿಂತಿದ್ದರು. ಊಟವನ್ನು ಅರ್ಧಕ್ಕೆ ಬಿಟ್ಟು ಎದ್ದಿದ್ದರೂ ಯಾರಿಗೂ ಊಟ ಬೇಕಿರಲಿಲ್ಲ. ಶಿವರಾಮು ಊಟದ ತಟ್ಟೆಗಳನ್ನು ತೆಗೆಯಲು ಡೈನಿಂಗ್ ಹಾಲಿಗೆ ಬಂದ. ಅವನಹಿಂದೆ ಆಶಾದೇವಿಯೂ ಬಂದಳು. ಶಿವರಾಮುನ ಗಮನ ಮೇಜಿನ ಮೇಲಿದ್ದ ಗೊಂಬೆಗಳ ಕಡೆಗೆ ತಿರುಗಿತು. ಆಶಾ ಬಗ್ಗಿ ನೋಡಿದಳು. ಅಪ್ರಯತ್ನ ಪೂರ್ವಕವಾಗಿ ಅವಳ ಬಾಯಿಂದ ಹೊರಬಿತ್ತು "ಅಹ್ಹಾ....ಆರೇ ಗೊಂಬೆಗಳು....ಊಟಕ್ಕೆ ಮುಂಚೆ ಏಳಿದ್ದವು"

ಆನಂದ ನಾಯರರ ದೇಹವನ್ನು ಪರೀಕ್ಷಿಸಿದ ಮೇಲೆ ಅಜಯನೊಡನೆ ಕೆಳಗಿಳಿದು ಬಂದ. ಉಳಿದವರೆಲ್ಲರೂ ಡ್ರಾಯಿಂಗ್‌ರೂಮಿನಲ್ಲಿ ಕುಳಿತಿದ್ದರು. ಸುಧಾ ಉಲ್ಲನ್ ನಿಟ್ಟಿಂಗ್ ಮಾಡುತ್ತಿದ್ದಳು. ಧರ್ಮಸಿಂಗ್ ಸಿಗಾರೇಟನ್ನು ಸೇದುತ್ತಾ ಯೋಚನಾಪರರಾಗಿದ್ದರು. ನಾಯರರ ಮರಣಕ್ಕೆ ಖಚಿತವಾದ ಕಾರಣವನ್ನು ಆನಂದನಿಂದ ತಿಳಿಯಲು ಎಲ್ಲರೂ ಕಾತುರರಾಗಿದ್ದರು. ಆನಂದ ಒಂಪುವನ್ನು ನೋಡಿ ಧರ್ಮಸಿಂಗ್ ಕತ್ತೆತ್ತಿ "ಮರಣಕ್ಕೆ ಕಾರಣವೇನಿರಬಹುದು ?" ಎಂದರು.

"ತಲೆಯ ಮೇಲೆ ಬಿದ್ದಿರುವ ಬಲವಾದ ಪೆಟ್ಟು........ ಮೇಲೆ ನೋಡಲು ಆ ಘಾಯ ಅಷ್ಟು ಪ್ರಬಲವಾಗಿಲ್ಲದಿದ್ದರೂ ಏಟು ಬಹಳ ಜೋರಾಗಿ ಬಿದ್ದಿರಬೇಕು. ಕಬ್ಬಿಣದ ಸಾಮಾನಿನಿಂದಲೇ ಅಂತಹ ಹೊಡೆತ ಸಾಧ್ಯ ......."

"ಅವರು ಬಿದ್ದಿದ್ದ ಜಾಗದಲ್ಲಿ ಆಯುಧವೇನಾದರೂ ಸಿಕ್ಕಿತೇ ?" ಕೇಳಿದಳು ಸುಧಾ.

"ಇಲ್ಲ, ಏನೂ ಇರಲಿಲ್ಲ."

"ಹಾಗಾದರೆ ಹೇಗೆ ನಿರ್ಧರಿಸುವುದು ?" ಎಂದ ಅಜಯ.

"ಆ ಘಾಯದಿಂದಲೇ .........ನಮ್ಮ ಊಹಾಪೋಹಗಳಿಂದ ಈಗ ಯಾವ ಪ್ರಯೋಜನವೂ ಇಲ್ಲ" ಪ್ರಯತ್ನಪೂರ್ವಕ ಒಣನಗುವಿನಿಂದ ಅಜಯ "ಅದೇನೋ ನಿಜ.... .....ನಮ್ಮ ತರ್ಕದಿಂದ ಅವರನ್ನು ಬದುಕಿಸಲು ಸಾಧ್ಯವಿಲ್ಲ" ಎಂದ.

ಸ್ವಲ್ಪ ಹೊತ್ತು ಯಾರೂ ಬಾಯಿ ಬಿಡಲಿಲ್ಲ. ಸುಧಾ ಏನನ್ನೋ ಹೇಳಲು ಉತ್ಸುಕಳಾಗಿದ್ದರೂ ಅವಳ ಬಾಯಿಂದ ಮಾತುಗಳು ಹೊರಬೀಳಲಿಲ್ಲ. ಧರ್ಮಸಿಂಗ್ ಸಣ್ಣ ಧ್ವನಿಯಲ್ಲಿ ಹೇಳತೊಡಗಿದರು. ನ್ಯಾಯಾಧೀಶರ ಹಕ್ಕಿನಧ್ವನಿ ಅವರದಾಗಿತ್ತು. "ಇವತ್ತು ಬೆಳಗ್ಗೆಯಿಂದಲೂ ನಾನು ಇಲ್ಲಿಯ ಪರಿಸ್ಥಿತಿಯನ್ನೇ ಯೋಚಿಸಿದ್ದೇನೆ.... .....ನನ್ನ ಇಪ್ಪತ್ತು ವರ್ಷಗಳ ಕಾಲದ ಉದ್ಯೋಗದಲ್ಲಿ ಈ ರೀತಿಯ ಪರಿಸ್ಥಿತಿಯನ್ನು ಕೇಳಿರಲಿಲ್ಲ. ನೀವು ಬೆಳಗ್ಗೆಯೆಲ್ಲಾ ದ್ವೀಪವನ್ನು ಹುಡುಕಾಡುತ್ತಿದ್ದಿರಿ......ನಿಮ್ಮ ಉದ್ದೇಶ

ನಮ್ಮ ಕಣ್ಣಿಗೆ ಮಣ್ಣೆರಚಿ ಕೆಲಸ ಸಾಗಿಸುತ್ತಿರುವ ಅಜ್ಞಾತ ಕೊಲೆಗಾರ ನನ್ನು ಪತ್ತೆ ಮಾಡುವುದೇ ಆಗಿತ್ತು ಎಂಬುದರಲ್ಲಿ ಸಂದೇಹವಿಲ್ಲ...."

"ಹೌದು. ಅದೇ ನಮ್ಮ ಉದ್ದೇಶ್ಯ" ಎಂದ ಅಜಯ.

"ಆದರೆ ನಾನು ಯಾವ ನಿರ್ಧರಕ್ಕೆ ಬಂದಿದ್ದೆನೋ ನೀವೂ ಅದೇ ನಿರ್ಧರಕ್ಕೆ ಬಂದಿದ್ದೀರೆಂದು ನನ್ನ ಭಾವನೆ. ಕಿರ್ಪಚಂದ್ ಮತ್ತು ಸರೋಜ ಳ ಮರಣ ಕೇವಲ ಆಕಸ್ಮಿಕವಲ್ಲವೆಂದು ನನಗೆನಿಸುತ್ತಿತ್ತು .......ಈಗ ನಾಯರರ ಸಾವೂ ಅದೇ ಊಹೆಗೆ ಬೆಂಬಲವಾಗಿದೆ"

"ಸರಿ.... ನಮ್ಮ ಅಭಿಪ್ರಾಯವೂ ಅದೇ" ಎಂದ [illegible], ಅಜಯ ನನ್ನು ನೋಡಿ.

"ಆದರೆ ಅಷ್ಟು ನಿರ್ಧರಿಸಿದ ಮಾತ್ರಕ್ಕೆ ನಮ್ಮ ಕೆಲಸ ಮುಗಿಯಲಿಲ್ಲ ........ನಮ್ಮ ನಮ್ಮ ಪ್ರಾಣ ನಮಗೆ ಅಮೂಲ್ಯ ....ಅದನ್ನು ಕಾಪಾಡಿ ಕೊಳ್ಳುವುದು ನಮ್ಮ ಈಗಿನ ಜವಾಬ್ದಾರಿ... ....ಅದಕ್ಕೆ ದಾರಿ ಹುಡುಕ ಬೇಕು."

"ಆದರೆ ನಾವು ಏಳು ಜನರ ಹೊರತು ......ಅಲ್ಲ, ಆರು ಜನರ ಹೊರತು ಬೇರೆ ಯಾರೂ ಈ ದ್ವೀಪದಲ್ಲಿಲ್ಲ ...... ಇದು ನಿರ್ವಿವಾದ" ಎಂದ ಅಜಯ.

"ಹೌದು, ನೀವು ಹೇಳುವ ಅರ್ಥದಲ್ಲಿ ನಮ್ಮ ಹೊರತು ಬೇರೆ ಯಾರೂ ಇಲ್ಲ ಎಂಬ ನಿಶ್ಚಯಕ್ಕೆ ನಾನು ಈ ಬೆಳಗ್ಗೆಯೇ ಬಂದೆ... .....ಆದರೆ ಹಾಗೆ ಒಪ್ಪಿಕೊಂಡರೆ ಈ ಮರಣಗಳಿಗೆ ಕಾರಣರಾರು ? ಎಂಬ ಪ್ರಶ್ನೆ ಉದ್ಭವಿಸು ತ್ತದೆ"

"ನನಗೆ ಒಂದು ವಿಚಾರ ಹೊಳೆದಿದೆ. ಆದರೆ ನೀವು ಅದನ್ನು ಒಪ್ಪು ತ್ತೀರೋ ಇಲ್ಲವೋ ....." ಎಂದಳು ಸುಧಾ.

"ಏನದು ?"

ಸುಧಾ ಅನುಮಾನಿಸಿ ನುಡಿದಳು, "ನಮ್ಮಲ್ಲಿಯೇ ಯಾರೋ ಒಬ್ಬ ಇದಕ್ಕೆ ಮೂಲನಾಗಿರಬೇಕು."

ಧರ್ಮಸಿಂಗ್ ಎಂದರು, "ನನಗೂ ಹಾಗೇ ತೋರುತ್ತಿದೆ........ಇಲ್ಲದಿ

ದ್ದರೆ ಈ ಘಟನೆಗಳು ಬೇರೆರೀತಿ ಸಾಧ್ಯವೇ ಇಲ್ಲ...... ನಮ್ಮಲ್ಲಿಯೇ ಒಬ್ಬ ಈ ಅಜ್ಞಾತ ಮಾರ್ಧರ್ನ ಆಗಬಹುದೇ ?"

*  *  *

"ಇಲ್ಲ, ಇಲ್ಲ, ಖಂಡಿತಾ ಇಲ್ಲ" ಎಂದು ಗೋಳಿಡುವ ಧ್ವನಿಯಲ್ಲಿ ಅರಚಿದಳು ಆಶಾ. ಸುಧಾ ಅವಳನ್ನು ಸಮಾಧಾನ ಪಡಿಸಲೆತ್ನಿಸಿದಳು. ಧರ್ಮಸಿಂಗ್ ಅವಳಕಡೆಗೆ ತಿರುಗಿ "ನಾವೆಲ್ಲರೂ ಅತ್ಯಂತ ಅಪಾಯದ ಸನ್ನಿವೇಶದಲ್ಲಿ ಸಿಕ್ಕಿಬಿದ್ದೇವೆ. ಇಂತಹ ಸಂದರ್ಭದಲ್ಲಿ ಸತ್ಯಾಂಶದ ಬಗ್ಗೆ ವಿವೇಚಿಸಲು ಹಿಂದೆಗೆಯುವುದು ತಪ್ಪು. ನಮ್ಮ ಹೊರತು ಇಲ್ಲಿ ಇನ್ನಾರೂ ಇಲ್ಲವೆಂದಮೇಲೆ 'ಮರ್ಧರ್ನ' ನಮ್ಮ ಪೈಕಿಯೇ ಒಬ್ಬನಾಗಿರಬೇಕು. ಆದರೆ ಯಾರೆಂಬುದು ಗೊತ್ತಿಲ್ಲ. ಸತ್ತ ಮೂವರಂತೂ ನಿರಪರಾಧಿಗಳು. ಉಳಿದ ಆರು ಜನರಲ್ಲಿಯೇ ಒಬ್ಬನು ಕೊಲೆಗಾರನಿರಬೇಕು .... ನೀವೆಲ್ಲಾ ಈ ವಾದವನ್ನು ಒಪ್ಪುತ್ತೀರೋ?" ಎಂದರು.

ಆನಂದ, "ವಾದ ವಿಚಿತ್ರವಾಗಿದ್ದರೂ ತರ್ಕಬದ್ಧವಾಗಿದೆ" ಎಂದ.

ಸುಧಾ ಎಂದಳು, "ನನಗೂ ಹಾಗೇ ತೋರುತ್ತಿದೆ ... .... ನಮ್ಮಲ್ಲಿ ಯಾವನೋ ಒಬ್ಬನಿಗೆ ಕೊಲೆಯ ಹುಚ್ಚು ಹಿಡಿದಿದೆ. ಅವನ ಮೈಮೇಲೆ ಯಾವುದೋ ದೈವ ಬಂದಿರಬೇಕು"

"ಛೆ ! ಖಂಡಿತ ಸಾಧ್ಯವಿಲ್ಲ....ನಾನು ಅದನ್ನು ನಂಬಲಾರೆ" ಆಶಾಳ ಅಭಿಪ್ರಾಯ ದೃಢವಾಗಿತ್ತು.

ಅಜಯ ಕೂಡ ಇದನ್ನು ಒಪ್ಪಲು ಸಿದ್ಧನಾಗಿರಲಿಲ್ಲ. ತನ್ನ ಸರದಿ ಬಂದಾಗ, "ಇನ್ನೂ ನನಗೆ ಅನುಮಾನವಿದೆ ....ಬೇರೆ ಯಾರಾದರೂ ಇಲ್ಲಿ ಅಡಗಿರಬಹುದೆ ಎಂದು" ಎಂದ.

ಧರ್ಮಸಿಂಗ್, "ಸರಿ.... ಈಗ ಯಾರಮೇಲಾದರೂ ಅನುಮಾನ ಬರಲು ಕಾರಣಗಳೇನಾದರೂ ಇದೆಯೋ ಎಂದು ನೋಡಬೇಕು" ಎಂದು ಎಲ್ಲರನ್ನೂ ನೋಡಿದರು.

ಆನಂದ ಅಜಯನ ಕಡೆಗೆ ತಿರುಗಿ "ಅಜಯರ ಬಳಿ ಒಂದು ರಿವಾಲ್ವರ್ ಇದೆ..... ಅವರು ನಿನ್ನೆ ಪೂರ್ಣ ಸತ್ಯವನ್ನು ತಿಳಿಸಲಿಲ್ಲ" ಎಂದ.

ಎಲ್ಲರೂ ಅಜಯನ ಕಡೆಗೆ ಸಂದೇಹಪೂರಿತ ನೋಟವನ್ನು ಬೀರಿದರು. ಅಜಯ ಸಂಗ್ರಹವಾಗಿ, ತಾನು ರಿವಾಲ್ವರ್ ತರಲು ಕಾರಣವನ್ನು ವಿವರಿಸಿದ.

"ಪುನಃ ಅದೇ ಕಥೆ....ನಿಮ್ಮ ಮೇಲಿನ ಸಂದೇಹನಿವಾರಣೆಗೆ ಅದು ಸಾಧಕವಲ್ಲ" ಎಂದ ಆನಂದ.

ಧರ್ಮಸಿಂಗ್ ಮುಂದುವರಿಸಿದರು—"ನಾವುಗಳು ಒಂದೇ ರೀತಿಯ ಅಪಾಯಸ್ಥಿತಿಯಲ್ಲಿದ್ದೇವೆ. ಇದನ್ನು ವಿವೇಚಿಸುವ ಕೆಲಸವೂ ಧರ್ಮಸಂಕಟ.... ...ನಿಸ್ಸಂದೇಹವಾಗಿ ಇಲ್ಲಿ ಯಾರನ್ನಾದರೂ ನಾವು ನಿರಪರಾಧಿಯೆಂದು ನಿರ್ಧರಿಸಲು ಸಾಧ್ಯವೇ—ಎಂದು ನೋಡಬೇಕು."

ಆನಂದ ಉತ್ಸಾಹ ಪೂರಿತ ಧ್ವನಿಯಲ್ಲಿ ಹೇಳಿದ—

"ನಾನು ಸುಪ್ರಸಿದ್ಧ ಡಾಕ್ಟರ್.... ಸಮಾಜದಲ್ಲಿ ನನಗಿರುವ ಸ್ಥಾನ ಗಣ್ಯವಾದುದು" ಅವನ ಮಾತಿನಲ್ಲಿ ಹೆಮ್ಮೆಯಿತ್ತು. ಧರ್ಮಸಿಂಗ್ ಅವನ ಮಾತನ್ನು ಅಷ್ಟಕ್ಕೇ ತಡೆದು ನಿಲ್ಲಿಸಿ, "ಹಾಗೆ ನೋಡಿದರೆ ನಾನೂ ಸುಪ್ರಸಿದ್ಧ ನ್ಯಾಯಾಧೀಶನಾಗಿದ್ದೆ. ಇಲ್ಲಿ ಇರುವವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಸುಪ್ರಸಿದ್ಧರೇ ಆಗಿರಬಹುದು. ಅಂದ ಮಾತ್ರಕ್ಕೆ ವಿಚಾರಣೆಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಎಷ್ಟೋ ಡಾಕ್ಟರುಗಳೂ, ನ್ಯಾಯಾಧೀಶರೂ, ಧಾರಿ ವರ್ತಕರೂ ಕೊಲೆಗಳನ್ನು ಮಾಡಿರುವ ನಿದರ್ಶನಗಳಿಲ್ಲವೆ? ಎಂದರು.

ಅಜಯ "ಏನೇ ಆಗಲಿ ನಾವು ಹೆಂಗಸರುಗಳನ್ನು ಬಿಟ್ಟುಬಿಡಬಹುದು ಅಲ್ಲವೇ ?" ಎಂದ.

"ಅಂದರೆ ಹೆಂಗಸರು ಇಂತಹ ಅಪರಾಧಗಳನ್ನು ಮಾಡುವುದಿಲ್ಲವೆಂದು ನಿಮ್ಮ ಅಭಿಪ್ರಾಯವೇ ?" ಎಂದ ಆನಂದ. ಧರ್ಮಸಿಂಗರ ಕಣ್ಣುಗಳೂ ಅದೇ ಪ್ರಶ್ನೆಯನ್ನೇ ಕೇಳುತ್ತಿದ್ದವು.

"ಹಾಗೇನೂ ಇಲ್ಲ....ಆದರೆ ಈ ಸಂದರ್ಭದಲ್ಲಿ......"

ಧರ್ಮಸಿಂಗ್ ಆನಂದನ ಕಡೆಗೆ ತಿರುಗಿ, "ಗೋವಿಂದನಾಯರರ

ತಲೆಯಲ್ಲಿ ಆಗಿರುವ ಘಾಯ ಯಾವುದಾದರೂ ಹೆಂಗಸಿನ ಹೊಡೆತದಿಂದ ಸಾಧ್ಯವೇ ?" ಎಂದರು.

"ಓಹೋ ಏಕೆ ಸಾಧ್ಯವಿಲ್ಲ ? ಬಲವಾದ ಆಯುಧದಿಂದ ಎಂತಹ ನಿಶ್ಯಕ್ತ ಹೆಂಗಸಾದರೂ ಅಂತಹ ಕೊಲೆಯನ್ನು ಮಾಡಲು ಸಾಧ್ಯ"

ಆಶಾಳ ಮುಖ ಕೆಂಪೇರಿತು. "ನಿಮುಗೆಲ್ಲರಿಗೂ ಹುಚ್ಚುಹಿಡಿದಿದೆ. ವ್ಯರ್ಥವಾಗಿ ತರ್ಕಮಾಡುತ್ತಿದ್ದೀರಿ" ಎಂದು ಅರಚಿದಳು. ಅವಳ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳದೆ ಧರ್ಮಸಿಂಗ್ ಸುಧಾಳ ಕಡೆಗೆ ತಿರುಗಿ, "ಸುಧಾದೇವಿ, ನಾವೆಲ್ಲರೂ ಒಂದೇ ಸಂದೇಹಕ್ಕೊಳಗಾಗಿದ್ದೇವೆ....ಎಲ್ಲರೂ ವಿಚಾರಣೆಗೊಳಗಾಗಬೇಕು, ಇದರಿಂದ ಯಾರೂ ಹೊರತಾಗುವಂತಿಲ್ಲ, ಎಂದರೆ ನಿಮಗೆ ಅನ್ಯಾಯವಾದೀತೆ ?" ಎಂದರು.

"ಇತರರ ವಿಚಾರ ಕುರಿತು ಹೇಳಲು ನನಗೆ ಹಕ್ಕಿಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ ನನ್ನ ಪೂರ್ವಚರಿತ್ರೆ ತಿಳಿದವರು 'ಮೂರು ಕೊಲೆಗಳ ಪಾತಕಿ' ಎಂಬ ಆಪಾದನೆಯನ್ನು ಕೇಳಿ ನಕ್ಕುಬಿಟ್ಟಾರು. ಆದರೂ ಸರಿಯಾದ ಸಾಕ್ಷ್ಯಗಳಿಂದ ಸಂದೇಹ ನಿವಾರಣೆಯಾದಹೊರತು ನನಗೆ ಸಮಾಧಾನವಿಲ್ಲ"

"ಸರಿ.....ಹಾಗಾದರೆ ಸ್ಥಾನ, ಮಾನ, ಪೂರ್ವಚರಿತ್ರೆಯ ಆಧಾರದ ಮೇಲೆ ನಮ್ಮಲ್ಲಿ ಯಾರನ್ನೂ ನಿರಪರಾಧಿ ಎಂದು ನಿರ್ಧರಿಸುವಂತಿಲ್ಲ."

ಅಜಯ, ಶಿವರಾಮುನಿಲ್ಲದಿರುವುದನ್ನು ಗ್ರಹಿಸಿ—"ಅಂದಹಾಗೆ ಶಿವರಾಮನ ವಿಚಾರ.... ಅವನ ಮೇಲೆ ಸಂದೇಹಕ್ಕೆ ಕಾರಣಗಳಿವೆ." ಎಂದ.

"ಸರೋಜಳನ್ನು ಅವನೇ ಕೊಂದಿರಬಹುದೆ ?"

"ಯಾಕಿರಬಾರದು ?"

"ನಿಜ....ಪತ್ನಿಯನ್ನೇ ಕೊಲ್ಲುವುದರಲ್ಲಿ ಅಸಂಭವವೇನಿಲ್ಲ......ಆದರೆ ಈ ಸನ್ನಿವೇಶದಲ್ಲಿ ಹಾಗಿರಲಾರದು ಎಂದು ತೋರುತ್ತದೆ..........ಏಕೆಂದರೆ ಶಿವರಾಮನೇ ಇದಕ್ಕೆ ಮೂಲನಾದರೆ ತಾನೂ ತನ್ನ ಹೆಂಡತಿ ಇಬ್ಬರೂ ಸೇರಿ ಎಸಗಿದ ಕೊಲೆಯ ಸೇಡಿಗೆ ಪತ್ನಿಯನ್ನೇಕೆ ಆಹುತಿ ತೆಗೆದುಕೊಳ್ಳಬೇಕು ?" ಎಂದ ಆನಂದ.

"ಆ ಕಥೆ ಸುಳ್ಳಿರಬಹುದು.........ಶಿವರಾವು ಸರೋಜರ ಮೇಲಿನ ಆರೋಪಣೆಯೇ ಸುಳ್ಳಿರಬಹುದು. —ಕೇವಲ ಸಂಟಿಕೆ[illegible]ಗಿರಬಹುದು. ಇತರರ ಪರಿಸ್ಥಿತಿಯಲ್ಲಿಯೇ ತಾನೂ ಇದ್ದೇನೆಂದು ತೋರಿಸಿಕೊಳ್ಳಲು ಆ ಕಥೆಯನ್ನು ಸೇರಿಸಿರಬಹುದು." ಅಜಯನ ವಾದದಲ್ಲಿ ಹುರುಳಿತ್ತು. ಧರ್ಮಸಿಂಗರೂ ಒಪ್ಪಿಗೆಯ ತಲೆದೂಗಿದರು.

"ಮಾಧವನ್" ನಮ್ಮಲ್ಲಿಯೇ ಒಬ್ಬನೆಂದು ಭಾವಿಸಿಕೊಂಡು ಸಾಧ್ಯತೆಗಳನ್ನು ವಿವೇಚಿಸೋಣ. .....ನಾವು ಬಂದಾಗಿನಿಂದ ಇಲ್ಲಿ ಮೂರು ಮರಣಗಳು ಸಂಭವಿಸಿದೆ. ಅವು ಕೊಲೆಯೋ, ಆತ್ಮಹತ್ಯೆಯೋ, ಆಕಸ್ಮಿಕವೊ ನಮಗೆ ತಿಳಿಯಲುಸಾಧ್ಯವಿಲ್ಲ. ಸಧ್ಯಕ್ಕೆ ಅವು ಕೊಲೆಗಳೆಂದೇ ನಾವು ಭಾವಿಸಿಕೊಂಡು, ಘಟನೆಗಳ ಆಧಾರದ ಮೇಲೆ ಯಾರಾರ ಕೈವಾಡ ಅದರಲ್ಲಿ ಸ್ವಲ್ಪವೂ ಇಲ್ಲವೆಂದು ನಿರ್ಧರಿಸಿ, ಅವರನ್ನು ಸಂದೇಹದಿಂದ ಬಿಡುಗಡೆ ಮಾಡಬೇಕಾಗಿದೆ."

ಧರ್ಮಸಿಂಗರ ಮಾತುಗಳಲ್ಲಿ ಉತ್ಕೃಷ್ಟ ನ್ಯಾಯಾಧೀಶರ ತರ್ಕಬದ್ಧ ವಾದಸರಣಿ, ತೀಕ್ಷ್ಣತೆ ಸ್ಪಷ್ಟವಾಗಿತ್ತು. ಮೂವತ್ತು ವರ್ಷಗಳಕಾಲದ ಪದವಿಯಿಂದ ಸಹಜವಾಗಿ ಅವು ಅವರಿಗೆ ಲಭಿಸಿದ್ದವು. ಅದೊಂದು ಸಣ್ಣ ನ್ಯಾಯಾಲಯದಂತೆ ತೋರುತ್ತಿತ್ತು. ಆದರೆ ಅದರ ವಿಶೇಷ—ಅಲ್ಲಿ ಎಲ್ಲರೂ ಅಪರಾಧಿಗಳೇ !

ಧರ್ಮಸಿಂಗ್, "ಮೊದಲು ಕಿಷನ್‌ಚಂದನ ಮರಣ. ಆ ಸಮಯದಲ್ಲಿ ನಾವೆಲ್ಲರೂ ಎದುರಿಗೇ ಇದ್ದೆವು. ಕಿಟಕಿಯ ಬಳಿ ಇದ್ದ ಅವನ ಗ್ಲಾಸಿಗೆ ಹೊರಗಡೆಯಿಂದ ಯಾರಾದರೂ ಏನನ್ನಾದರೂ ಹಾಕಿರಬಹುದೆಂದು ಊಹಿಸಬಹುದಾದರೂ ನಮ್ಮ ಹೊರತು ಇಲ್ಲಿ ಯಾರೂ ಇಲ್ಲವೆಂದಮೇಲೆ ಅವನ ಮರಣಕ್ಕೆ ಕಾರಣ ಕಂಡುಹಿಡಿಯುವ ಪ್ರಯತ್ನ ವ್ಯರ್ಥ..... ಸಧ್ಯಕ್ಕೆ ಅದು ಆತ್ಮಹತ್ಯೆಯೇ ಎಂದು ಇಟ್ಟುಕೊಳ್ಳೋಣ...... ಎರಡನೆಯದು ಸರೋಜಮ್ಮನ ಮೃತ್ಯು.... ಅವಳನ್ನು ಉಪಚರಿಸುತ್ತಾ ಹೆಚ್ಚಾಗಿ ಅವಳ ಬಳಿ ಇದ್ದವರು ಇಬ್ಬರು. ಅವಳ ಗಂಡ ಶಿವರಾವ್ ಮತ್ತು ಆನಂದ್."

ಆನಂದನ ಮುಖ ಕೋಪದಿಂದ ಕೆಂಪಾಯ್ತು. ಅವನು ಅರಚಿದ. "ಶುದ್ಧ ಹುಚ್ಚು, ನಾನು ಅವಳಿಗೆ ಔಷಧಿಯಲ್ಲಿ........." ಎಂದು ಅರ್ಧಕ್ಕೇ ನಿಲ್ಲಿಸಿದ.

"ನಿಮ್ಮ ಪ್ರತಿಭಟನೆ ಸಹಜವೇ ಸರಿ. ಆದರೆ ಈಗ ನಾವು ಮಾಡುತ್ತಿರುವ ಕೆಲಸ ಕೇವಲ ಸಾಧ್ಯತೆಗಳನ್ನು ಪರಿಶೀಲಿಸುವುದೇ ಆಗಿದೆ. ........ನಿಮ್ಮಿಬ್ಬರಲ್ಲಿ ಯಾರಾದರೂ ಆ ಕೆಲಸ ಮಾಡಬಹುದಾಗಿತ್ತು ಎಂದು ನನ್ನ ಅಭಿಪ್ರಾಯವೇ ಹೊರತು ನೀವೇ ಮಾಡಿದಿರಿ ಎಂದಲ್ಲ"

ಆನಂದನ ಮುಖದ ಬಣ್ಣ ನಿಧಾನವಾಗಿ ಮಾಯವಾಯಿತು.

"ಅಂದ ಮಾತ್ರಕ್ಕೆ ಉಳಿದವರನ್ನು ನಿಸ್ಸಂದೇಹವಾಗಿ ಬಿಟ್ಟುಬಿಡುವಂತಿಲ್ಲ" ಎಂದು ಮುಂದುವರೆದರು ಧರ್ಮಸಿಂಗ್.

"ಏಕೆ ? ನಾನು ಸರೋಜಳ ಹತ್ತಿರವೇ ಬರಲಿಲ್ಲ. ನನ್ನ ಮೇಲೆ ಸಂದೇಹವೇಕೆ ?" ಎಂದಳು ಆಶಾ.

"ಹಾಗಲ್ಲ.........ನಾವು ನಿಧಾನವಾಗಿ ನಡೆದ ಘಟನೆಗಳನ್ನು ನೆನೆಸಿಕೊಳ್ಳೋಣ........ನಾನೇನಾದರೂ ತಪ್ಪಿದರೆ ದಯವಿಟ್ಟು ತಿದ್ದಬೇಕು. ಹೊರಗೆ ಓಡಿಬಂದು ಬಿದ್ದ ಸರೋಜಮ್ಮನನ್ನು ಇಲ್ಲಿನ ಸೋಫಾದ ಮೇಲೆ ಮಲಗಿಸಿದ ಮೇಲೆ, ನಾವು ಕೇಳಿದ 'ವಿಚಿತ್ರ ಧ್ವನಿ'ಯ ಬಗ್ಗೆ ವಾದ ವಿವಾದಗಳು ಆರಂಭವಾದವು. ಅಜಯ ಎದ್ದು ಹೋಗಿ ಆ ರೂಮಿನಲ್ಲಿದ್ದ ಗ್ರಾಮೋಫೋನನ್ನು ಪತ್ತೆ ಮಾಡಿದ. ನಾವೆಲ್ಲ ಎದ್ದು ಆ ಕೋಣೆಗೆ ಹೋದೆವು....ಆದರೆ ಸುಧಾದೇವಿ ಮಾತ್ರ ಅಲ್ಲಿಯೇ ಇದ್ದರು, ಸರೋಜಳ ಪಕ್ಕದಲ್ಲಿ........"

ಸುಧಾ ನಿಟ್ಟಿಂಗ್ ನಿಲ್ಲಿಸಿ ಉದ್ರಿಕ್ತ ಧ್ವನಿಯಲ್ಲಿ ನುಡಿದಳು, "ತರ್ಕ ಮಿತಿಮೀರಿ ಹೋಗುತ್ತಿದೆ. ಪ್ರಜ್ಞೆತಪ್ಪಿ ಬಿದ್ದವಳಿಗೆ ಗಾಳಿ ಹಾಕುವುದೂ ತಪ್ಪೇ ?"

"ಛೇ ! ಹಾಗಲ್ಲ.......ನಾನು ಕೇವಲ ಘಟನೆಗಳು ನಡೆದಂತೆ ವಿವರಿಸುತ್ತಿದ್ದೇನೆ. ಆಮೇಲೆ ಸರೋಜಮ್ಮನಿಗೆ ಹಾಲು ಕೊಡಲಾಯಿತು. ನಂತರ ಆನಂದ್ ಅವಳಿಗೆ ನಿದ್ರೆ ಬರುವಂತೆ ಔಷಧಿ ಕೊಟ್ಟರು ಅಲ್ಲವೇ ?"

"ಹೌದು, ಅಂದಮೇಲೆ ನಾನು, ಧರ್ಮಸಿಂಗ್ ಮತ್ತು ಆಶಾ ಸಂದೇಹ ದಿಂದ ಹೊರಗಾದಂತೆಯೇ" ಎಂದ ಅಜಯ.

"ಆದರೆ ನಮ್ಮ ವಿಚಾರಣೆ ಅಲ್ಲಿಗೇ ಬಿಡುವಂತಿಲ್ಲ. ಒಂದು ವೇಳೆ ಯಾರಾದರೂ ಸರೋಜಮ್ಮನ, ಬಳಿ ಹೋಗಿ 'ಡಾಕ್ಟರು ಹೇಳಿದ್ದಾರೆ. ಈ ಔಷಧಿ ತೆಗೆದುಕೊಳ್ಳಿ' ಎಂದು ಏನಾದರೂ ಸೇವಿಸಲು ಕೊಟ್ಟಿದ್ದರೆ ಅವಳು ಅದನ್ನು ಕುಡಿಯಲು ಅನುಮಾನಿಸುತ್ತಿದ್ದಳೇ ?"

"ಖಂಡಿತ ಇಲ್ಲ" ಎಂದ ಆನಂದ.

"ಅದು ಸಾಧ್ಯವಿಲ್ಲ.........ಶಿವರಾಮನಿಗೆ ತಿಳಿಯದೆ ಹಾಗಾಗುವುದು ಅಸಂಭವ" ಎಂದ ಅಜಯ.

"ಆದರೆ ......ನಾವೆಲ್ಲರೂ ಮೇಲೆ ಹೋದಮೇಲೆ, ಶಿವರಾಮ ನೇರವಾಗಿ ಮಲಗಲು ಹೋಗಲಿಲ್ಲ.....ಅಡಿಗೆ ಮನೆಯಲ್ಲಿ ಉಳಿದ ಕೆಲಸಗಳನ್ನು ಮಾಡಲು ಹೋಗಿರಬೇಕು. ಆಗ ಅರ್ಧ ಘಂಟೆಯಾದರೂ ಅವಕಾಶವಿತ್ತಲ್ಲವೇ ?" ಧರ್ಮಸಿಂಗ್ ಅಜಯನ ವಾದವನ್ನು ಖಂಡಿಸಿದರು.

"ಆದರೆ, ಆ ಅವಕಾಶವನ್ನು ಉಪಯೋಗಿಸಿಕೊಂಡವರಾರು ಎಂದು ನಿರ್ಧರಿಸಲು ನಮಗೆ ಯಾವ ಸಾಧನಗಳೂ ಇಲ್ಲವಲ್ಲ"

"ನಿಜ. ಆದ್ದರಿಂದಲೇ ಸರೋಜಳ ಮರಣದ ರಹಸ್ಯವನ್ನು ಭೇದಿಸಲು ಸಾಧ್ಯವಿಲ್ಲ.....ಅಂದರೆ ಮೊದಲ ಎರಡು ಮರಣಗಳೂ ರಹಸ್ಯವಾಗಿಯೇ ಉಳಿದಂತಾಯ್ತು."

"ನಮ್ಮ ವಿಚಾರಣೆ ತರ್ಕಬದ್ಧವಾಗಿದ್ದರೂ, ವ್ಯರ್ಥವೆಂದು ನನಗೆ ತೋರುತ್ತದೆ. ...ಅಲ್ಲವೇ ?" ಎಂದ, ಆನಂದ ಮೇಲೇಳುತ್ತ.

ಉಳಿದವರು ತಮ್ಮ ಜಾಗ ಬಿಟ್ಟು ಕದಲಲಿಲ್ಲ. ಧರ್ಮಸಿಂಗರ ವಾದದ ಸರಣಿ ಅವರನ್ನು ಸೆರೆ ಹಿಡಿದಿತ್ತು.

"ಇನ್ನು ನಾವು ಮೂರನೆಯ ಮರಣದ ಸನ್ನಿವೇಶವನ್ನು ಪರಿಶೀಲಿಸೋಣ......... ಗೋವಿಂದನ್‌ರವರು ಪ್ರಾಣನೀಗಿದ್ದು ಈ ಬೆಳಗ್ಗೆ. ಅದರಲ್ಲಿ ಯಾರ ಕೈವಾಡವಿರಲು ಸಾಧ್ಯವೆಂದು ನೋಡೋಣ. ಮೊದಲು ನನ್ನ ವಿಷಯವನ್ನೇ ತೆಗೆದುಕೊಂಡರೆ ಸಂದೇಹದಿಂದ ತಪ್ಪಿಸಿಕೊಳ್ಳಲು "ಬೆಳಗಿ

ನಿಂದಲೂ ನಾನು ಮುಂದಿನ ಅಂಗಳದಲ್ಲಿಯೇ ಕುಳಿತಿದ್ದೆ. ನಾನು ಜಾಗ ಬಿಟ್ಟು ಕದಲಲೇ ಇಲ್ಲ'ಎಂಬ ನನ್ನ ಮಾತಿನ ಹೊರತು ಬೇರೆ ಸಾಕ್ಷ್ಯ ನನಗಿಲ್ಲ" ಎಂದರು, ಧರ್ಮಸಿಂಗ್.

ಅಜಯ "ನಾನು, ಆನಂದ, ಶಿವರಾಮು ಒಟ್ಟಿಗೇ ಇದ್ದೆವು" ಎಂದ.

ಸ್ವಲ್ಪ ದೂರದಲ್ಲಿ ನಿಂತು ಸಿಗರೇಟನ್ನು ಸೇದುತ್ತಿದ್ದ ಆನಂದ ಪುನಃ ವಿಚಾರಣಾರಂಗವನ್ನು ಪ್ರವೇಶಿಸಿ, "ಮಧ್ಯೆ ಶಿವರಾಮು ಹಗ್ಗ ತರಲು ಹೋಗಿದ್ದ" ಎಂದ.

"ಹಗ್ಗ ತರಲು ಶಿವರಾಮು ಎಷ್ಟು ಕಾಲ ತೆಗೆದುಕೊಂಡಿರಬಹುದು.?"

"ಹತ್ತು ನಿಮಿಷವಿರಬಹುದು"

"ನಿಮ್ಮಿಂದ ಗೋವಿಂದನಾಯರ್ ಎಷ್ಟು ದೂರದಲ್ಲಿದ್ದರು ?"

"ಸುಮಾರು ಒಂದು ಫರ್ಲಾಂಗ್"

"ಆ ಅಲ್ಪಕಾಲದಲ್ಲಿ ಅದು ಸಾಧ್ಯವಿಲ್ಲ" ಎಂದು ಒಂದು ಕ್ಷಣ ಸುಮ್ಮನಾಗಿ ಮತ್ತೆ ಧರ್ಮಸಿಂಗ್ ಕೇಳಿದರು.—"ಶಿವರಾಮುನಿಲ್ಲದ ಹೊತ್ತಿನಲ್ಲಿ ನೀವಿಬ್ಬರೂ ಒಟ್ಟಿಗೆ ಇದ್ದಿರಾ ?"

ಆನಂದ ಅಜಯನ ಕಡೆ ನೋಡಿ "ಇಲ್ಲ... ಸ್ವಲ್ಪ ಹೊತ್ತು ಅಜಯ ನನ್ನಿಂದ ಅಗಲಿದ್ದರು."

ಅಜಯ ಕೋಪದಿಂದ ಆನಂದನನ್ನು ನೋಡಿ, "ಕೇವಲ ಎರಡು ನಿಮಿಷ....ಹಗ್ಗದಿಂದ ಇಳಿಯಲು ಅನುಕೂಲವಾದ ಜಾಗವನ್ನು ಹುಡುಕಲು ಹೋಗಿದ್ದೆ."

ಧರ್ಮಸಿಂಗ್ ತಲೆಯಲ್ಲಾಡಿಸಿ, ಸುಧಾದೇವಿಯ ಕಡೆ ತಿರುಗಿದರು.

"ಬೆಳಗ್ಗೆಯಿಂದಲೂ ನಾನು ಉಲ್ಲನ್ ಸ್ವೆಟರ್ ಹಾಕುತ್ತಿದ್ದೀನಿ." ಅವಳು ಸ್ವಲ್ಪವೂ ಉದ್ರಿಕ್ತಳಾಗಲಿಲ್ಲ. ಸುಧಾಳ ಉತ್ತರ ಅವಳ ಶಾಂತ ಮನಸ್ಸಿನ ಪ್ರತಿಮೆಯಾಗಿತ್ತು.

"ಎಲ್ಲಿ?"

"ಹೊರಗಿನ ತೋಟದಲ್ಲಿ, ಭವನದ ಪೂರ್ವಭಾಗದಲ್ಲಿ"....ಅವಳ ಉತ್ತರದಿಂದ ತೃಪ್ತರಾದ ಧರ್ಮಸಿಂಗ್ ಆಶಾದೇವಿಯ ಕಡೆಗೆ ತಿರುಗಿದರು.

"ಬೆಳಗ್ಗೆ ಸುಧಾದೇವಿಯೊಡನೆ ಇದ್ದೆ. ....ಆಮೇಲೆ ಸಮುದ್ರದಡಕ್ಕೆ ಹೋಗಿದ್ದೆ."

"ಅಲ್ಲಿಯೇ ಗೋವಿಂದನಾಯರ್ ಇದ್ದರು ಅಲ್ಲವೇ ?"

ಸಾವಧಾನವಾಗಿ ಹೇಳಿದಳು ಆಶಾ, "ಹೌದು"

ಎಲ್ಲರ ಕುತೂಹಲ ಕೆರಳಿತು.

"ಆಗ ಎಷ್ಟು ಗಂಟೆಯಿರಬಹುದು ?"

"ಸರಿಯಾಗಿ ಹೇಳಲಾರೆ .. ಊಟಕ್ಕಿಂತ ಸುಮಾರು ಒಂದು ಘಂಟೆ ಮುಂಚೆ."

ಅಜಯ ಕೇಳಿದ, "ಯಾವಾಗ ? ಅವರನ್ನು ನಾವು ನೋಡಿದ ಮೊದಲೋ ಅಥವಾ ಆಮೇಲೋ ?"

"ನೀವು ಅವರನ್ನು ನೋಡಿದ್ದು ಯಾವಾಗಲೋ ನನಗೆ ತಿಳಿಯದು. ಅವರು ನಿಮ್ಮ ವಿಚಾರ ಏನನ್ನು ಹೇಳಲಿಲ್ಲ.....ಅವರ ಮಾತುಗಳು ವಿಚಿತ್ರ ವಾಗಿದ್ದವು."

"ವಿಚಿತ್ರವಾಗಿದ್ದವು, ಎಂದರೆ ?"

"ನಾವೆಲ್ಲಾ ದ್ವೀಪದಲ್ಲಿ ಸಾಯುವುದು ಖಂಡಿತ. ಯಾರೂ ಇಲ್ಲಿಂದ ಹಿಂತಿರುಗುವುದಿಲ್ಲ..... ಎಂದು ಏನೇನೋ ಹೇಳುತ್ತಿದ್ದರು."

"ಆಮೇಲೆ ?"

"ಆಮೇಲೆ ನಾನು ಮನೆಗೆ ಬಂದುಬಿಟ್ಟೆ."

ಒಳಗೆ ಕೆಲಸದಲ್ಲಿ ನಿರತನಾಗಿದ್ದ ಶಿವರಾಮನನ್ನು ಕರೆಸಿದ್ದಾಯಿತು. ಅವನ ಹೇಳಿಕೆಯಂತೆ, ತಿಂಡಿ, ಕಾಫಿ, ಅಡಿಗೆ ಮಾಡುವುದರಲ್ಲಿಯೇ ಅವನ ಕಾಲ ಕಳೆದಿತ್ತು. ಮಧ್ಯೆಒಂದು ಸಾರಿ ತನ್ನ ಸಾಮಾನುಗಳನ್ನು ಮಹ ಡಿಯ ಮೇಲಿಂದ ಕೆಳಗಿನ ಅಡುಗೆ ಮನೆಯಪಕ್ಕದ ರೂಮಿಗೆ ಸಾಗಿಸಿದ್ದ. ದ್ವೀಪವನ್ನು ಪರೀಕ್ಷಿಸುವ ಕೆಲಸದಲ್ಲಿ ಅಜಯ ಆನಂದರಿಗೆ ಸಹಾಯಕ ನಾಗಿದ್ದ. ಶಿವರಾಮನ ವಿಚಾರಣೆ ಮುಗಿದ ಮೇಲೆ ಧರ್ಮಸಿಂಗ್ ಗಂಟ ಲನ್ನು ಸರಿಪಡಿಸಿಕೊಂಡು ಹೇಳಿದರು.—"ನಮ್ಮ ಕೈಲಾದಷ್ಟು ಮಟ್ಟಿಗೆ ನಾವು ಈ ಮೂರು ಮರಣದ ಬಗ್ಗೆ ವಿಚಾರಿಸಿದ್ದೇವೆ. ಈ ಕೊಲೆಗಳಲ್ಲಿ

ಇಂತಹವರ ಕೈವಾಡವಿರಬಹುದೆಂದು ಸಂದೇಹ ಪಡಲು ಕಾರಣಗ ಳಿದ್ದರೂ, ಅವರೇ ಅದನ್ನು ಮಾಡಿದ್ದಾರೆಂದು ಹೇಳಲು ಸಾಧ್ಯವಿಲ್ಲ ನಾನು ಇನ್ನೊಮ್ಮೆ ಒತ್ತಿ ಹೇಳುವುದೇನೆಂದರೆ ಈ ಆರು ಜನರ ಪೈಕಿ ಯಾರಿಗೋ ಕೊಲೆಯ ಹುಚ್ಚು ಹಿಡಿದಿದೆ. ಅವನ ಉದ್ದೇಶ್ಯ ನಮಗೆ ತಿಳಿಯದು. ಸದ್ಯದ ಪರಿಸ್ಥಿತಿಯಲ್ಲಿ ನಾವು ರಾಂಗಾಂವ್‌ನಿಂದ ಸಹಾಯ ವನ್ನು ಒದಗಿಸಿಕೊಳ್ಳಲು ಪ್ರಯತ್ನ ಪಡಬೇಕು. ಅಲ್ಲಿಯವರೆಗೂ ನಮ್ಮ ನಮ್ಮ ರಕ್ಷಣೆಯ ಜವಾಬ್ದಾರಿ ನಮಗೇ ಸೇರಿದ್ದು. ನಿಮಗೆ ಏನಾದರೂ ಯೋಚನೆಗಳು ಹೊಳೆದರೆ ಅದನ್ನು ಪರಸ್ಪರ ಎಲ್ಲರಿಗೂ ತಿಳಿಸಬೇಕು. ಅಂತೂ ಕ್ಷೇಮವಾಗಿ ನಗರವನ್ನು ಸೇರುವುದೇ ನಮಗೆಲ್ಲರಿಗೂ ಬೇಕಾಗಿ ರುವುದು."

"ಇಲ್ಲಿಗೆ ನಮ್ಮ ವಿಚಾರಣೆ ಮುಗಿದಂತಾಯ್ತು." ಎಂದ ಅಜಯ.

ಎಲ್ಲರೂ ಮೇಲೆದ್ದರು.

## ೧೦

"ನೀವು ಅದನ್ನು ನಂಬುತ್ತೀರಾ ?" ಎಂದು ಕೇಳಿದಳು ಆಶಾದೇವಿ. ಅವಳೂ ಅಜಯ ಇಬ್ಬರೂ ಡ್ರಾಯಿಂಗ್‌ರೂಮಿನ ಮೂಲೆಯ ಕಿಟಕಿಯ ಬಳಿ ಕುಳಿತಿದ್ದರು. ಹೊರಗಡೆ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಅಜಯ ಕ್ಷಣಕಾಲ ಯೋಚಿಸಿ, "ಅಂದರೆ....ನಮ್ಮಲ್ಲೇ ಒಬ್ಬರಿರಬೇಕು, ಎಂದು ಧರ್ಮಸಿಂಗ್ ಹೇಳಿದರಲ್ಲ – ಆ ಮಾತನ್ನೇ?" ಎಂದ.

"ಹ್ಞೂ...."

ಅಜಯ ಮತ್ತೆ ತಡೆದು ನುಡಿದ, "ಹೇಳುವುದು ಕಷ್ಟ....ತಾರ್ಕಿ ಕವಾಗಿ ಅವರ ಮಾತು ನಿಜವಾಗಿದೆ."

"ನಾನಂತೂ ಅದನ್ನು ನಂಬುವುದಿಲ್ಲ."

"ಆದರೆ ಒಂದಂತೂ ನಿಜ....ಇಲ್ಲಿ ಸಂಭವಿಸಿರುವ ಮರಣಗಳು ಆಕ ಸ್ಮಿಕವಲ್ಲ..... ಆತ್ಮಹತ್ಯೆಯುೂ ಅಲ್ಲ.....ಉದ್ದೇಶ್ಯ ಪೂರ್ವಕ ಕೊಲೆಗಳೇ"

ಆಶಾ ಥರಥರನೆ ನಡುಗಿದಳು. "ನನಗಂತೂ ಎಲ್ಲಾ ಭಯಂಕರ ಕನಸಿನಂತೆ ಕಾಣುತ್ತಿದೆ."

"ಕನಸಾಗಿದ್ದರೆ ಚೆನ್ನಾಗಿರುತ್ತಿತ್ತು.....ಆದರೆ ಎಲ್ಲಾ ನನಸೇ.... ಆದಷ್ಟು ಎಚ್ಚರಿಕೆಯಿಂದಿರಬೇಕು....ಹಾಳಾದ್ದು ದೋಣಿ ಯಾವಾಗ ಬರುತ್ತೋ ?....ಅಥವಾ ಬರುವುದೇ ಇಲ್ಲವೋ ?"

ಆಶಾ ಸುತ್ತಲೂ ನೋಡಿ ದನಿಯನ್ನು ತಗ್ಗಿಸಿ ಕೇಳಿದಳು, "ನಮ್ಮಲ್ಲಿಯೇ ಆದರೆ....ಯಾರಿರಬಹುದು ?"

"ನನ್ನ ಮೇಲಂತೂ ನಿಮಗೆ ಅನುಮಾನವಿಲ್ಲ ತಾನೇ?"

"ಸರಿ .. ಸರಿ ನಮ್ಮಿಬ್ಬರಲ್ಲಿ ಪರಸ್ಪರ ಸಂದೇಹವಿಲ್ಲ..... ಉಳಿದವರಲ್ಲಿ ಯಾರಿರಬಹುದು ?"

"ಯಾರಿರಬಹುದು ? ಅದೇ ಪ್ರಶ್ನೆ....ಉತ್ತರ ಕಷ್ಟ. ಸತ್ಯಾಂಶದ ಅರಿವಿಲ್ಲದೆ ಕೇವಲ ಊಹಿಸುವುದು ಅನ್ಯಾಯ. ಕೇವಲ ಊಹೆಯಿಂದ ಹೇಳುವುದಾದರೆ . ನನ್ನ ಅಭಿಪ್ರಾಯದಲ್ಲಿ ಧರ್ಮಸಿಂಗ್...."

"ಆ್ಞ" ಎಂದು ಆಶ್ಚರ್ಯದಿಂದ ಕಣ್ಣರಳಿಸಿ ನೋಡಿದಳು ಆಶಾ.

"ಊಹೆಗೆ ಕಾರಣ ?"

"ಕಾರಣ ಕೇಳಬೇಡಿ. ಅದು ಸಿದ್ಧಾಂತವಲ್ಲ....ಊಹೆಗೆ ಕಾರಣ ಹೇಳುವುದು ಅಸಾಧ್ಯ. ತಮ್ಮ ಜೀವಿತವನ್ನೆಲ್ಲಾ ಕೋರ್ಟಿನ ಕೇಸುಗಳಲ್ಲಿ ಶಿಕ್ಷೆ ವಿಧಿಸುವುದರಲ್ಲೇ ಕಳೆದ ಅವರ ಹೃದಯ ಕಲ್ಲಾಗಿರುತ್ತದೆ ....ಅಂಥವರೆ ಇಂಥಹ ಕಗ್ಗೊಲೆಗಳ ಕಾರಣರಾಗಿರಬಹುದು. "

"ಇರಬಹುದು....ಆದರೆ ನನ್ನ ಊಹೆ........ ಡಾ || ಆನಂದ್."

"ಡಾಕ್ಟರ್ ! ಅವರ ಮೇಲಿನ ಸಂದೇಹಕ್ಕೆ ಕಾರಣ ?"

"ಸ್ವಲ್ಪ ಯೋಚಿಸಿ ನೋಡಿ .. ಮೂರು ಮರಣಗಳಲ್ಲಿ ಎರಡು ವಿಷ ಸೇವನೆಯಿಂದ ಆಗಿದೆಯೆಂಬುದು ಖಚಿತವಾಗಿದೆ.....ಅಂದಮೇಲೆ ಅವೆರಡೂ ಡಾಕ್ಟರನ್ನು ಸೂಚಿಸುತ್ತವೆ.....ಆನಂದರಾಜ್ ಕೊಟ್ಟ ಔಷಧಿಯ ಮೇಲೆ ಸರೋಜ ಬೇರೆ ಏನನ್ನೂ ಕುಡಿಯಲಿಲ್ಲ ಎಂಬುದು ನಿಜವೇ ಆಗಿದ್ದರೆ...."

“ಹೌದು....ಅದೇನೋ ನಿಜ....ಆದರೆ ನಾಯರರ ಕೊಲೆ ಹೇಗೆ ನಡೆಯಿತು ?........ಮಧ್ಯಾಹ್ನ ಒಂದೆರಡು ನಿಮಿಷ ಬಿಟ್ಟರೆ ಅವರು ನನ್ನ ಜೊತೆಗೇ ಇದ್ದರು.”

“ಏಕೆ ? ಅವರಿಗೆ ಬೇರೆ ಅವಕಾಶ ದೊರೆತಿತ್ತು”

“ಯಾವಾಗ ?” ಕೇಳಿದ. ಅಜಯ ಕುತೂಹಲದಿಂದ.

“ಅವರನ್ನು ಊಟಕ್ಕೆ ಕರೆಯಲು ಹೋದಾಗ....ಆಗ ಉಳಿದವರೆಲ್ಲರೂ ಇಲ್ಲಿಯೇ ಇದ್ದೆವು........ಆಗಲೇ ಏಕೆ ಮಾಡಿರಬಾರದು ?”

“ಹೌದು....ಅಂದಹಾಗೆ ನಾನು ಮರೆತಿದ್ದೆ....ಅದಕ್ಕಿಂತ ಬೇರೆ ಸುಸಮಯ ಸಿಗಲಾರದು........ಇರಬಹುದು”

* * * *

ಆನಂದ ಅರಚಿದ, “ಹೇಗಾದರೂ ಮಾಡಿ ನಾವು ಇಲ್ಲಿಂದ ಹೊರಟುಬಿಡಬೇಕು”

“ಖಂಡಿತ....ಆದರೆ ಹೇಗೆ ಹೋಗುವುದೆಂಬುದೇ ಸಮಸ್ಯೆಯಾಗಿದೆ. ...ಆ ಬೋಟು ಬರಲಿಲ್ಲವಲ್ಲ” ಎಂದರು ಧರ್ಮಸಿಂಗ್. ಅವರು ಕಿಟಕಿಯ ಮುಂದೆ, ಸಮುದ್ರದ ಕಡೆಗೆ ತಿರುಗಿ ನಿಂತಿದ್ದರು. ಆನಂದನಿಗೆನಿಸಿತು —“ವಯಸ್ಸಾಗಿದ್ದರೂ ಧರ್ಮಸಿಂಗ್‌ಗೆ ನಮಗಿಂತ ಹೆಚ್ಚಾಗಿ ಜೀವದ ಮೇಲೆ ಆಸೆಯಿದೆ” ಎಂದು.

“ಶ್ಯಾಮಲಾಲ್ ಬರುವುದರೊಳಗೆ ಏನೇನು ಅನಾಹುತಗಳಾಗುವುದೋ. ಈಗಾಗಲೇ ಮೂರು ಕೊಲೆಗಳಾಗಿವೆ” ಎಂದ ಆನಂದ

“ನಿಜ. ಆದರೆ ಅವರಾರೂ ಅಪಾಯವನ್ನು ಎದುರಿಸಲು ಸಿದ್ಧವಿರಲಿಲ್ಲ. ಈಗ ನಾವಾದರೆ ಎಚ್ಚರಿಕೆಯಿಂದಿದ್ದೇವೆ.....”

“ಎಚ್ಚರಿಕೆಯೊಂದೇ ಸಾಲದು....ಇಲ್ಲಿಂದ ಪಾರಾಗಲು ಉಪಾಯ ಯೋಚಿಸಬೇಕು. ನನಗಂತೂ ಏನೂ ಹೊಳೆಯದು.”

“ಹಲವಾರು ಉಪಾಯಗಳೇನೋ ಹೊಳೆದಿವೆ. ಆದರೆ ಯಾವುದನ್ನೂ ಕಾರ್ಯಗತ ಮಾಡಲು ಕಷ್ಟವಾದೀತು”

ಸಣ್ಣದನಿಯಲ್ಲಿ ಕೇಳಿದ ಆನಂದ "ನಿಮಗೆ ಯಾರ ಮೇಲಾದರೂ ಅನುಮಾನ ಬಂದಿದೆಯೇ ? ನ್ಯಾಯಾಧೀಶರಾಗಿದ್ದ ನಿಮಗೆ ಸೂಕ್ಷ್ಮಪರಿಶೀಲನಾ ಬುದ್ಧಿ ಇರುವುದೆಂದು ನನ್ನ ನಂಬಿಕೆ"

"ಆದರೆ ಊಹೆ, ಸಿದ್ಧಾಂತವಾಗಲಾರದು. ಘಟನೆಗಳನ್ನು ಪರಿಶೀಲಿಸುವುದರಿಂದ ಇದರ ಹಿಂದೆ ಅಡಗಿರುವ ವ್ಯಕ್ತಿಯನ್ನು ಊಹಿಸಬಹುದಾದರೂ ..ಯಾವ ನಿಶ್ಚಯಕ್ಕೆ ಬರುವುದೂ ಸ್ವಲ್ಪ ಕಷ್ಟವೇ.........."

* * * *

ಸುಧಾದೇವಿ ತನ್ನ ಡೈರಿಯನ್ನು ತೆಗೆದು ಬರೆಯತೊಡಗಿದಳು—

'ಈದಿನ ಇನ್ನೊಂದು ಅನಾಹುತವಾಯ್ತು. ಮೇ|| ಜ|| ಗೋವಿಂದ ನಾಯರ್ ಕೊಲೆಯಾದವರು ಇದುವರೆಗೆ ಇಲ್ಲಿ ಮೂರು ಕೊಲೆಗಳಾಗಿವೆ. ಇಂದಿನವರೆಗೂ ಸಮಸ್ಯೆ ಬಗೆಹರಿದಿಲ್ಲ. ಆದರೆ ಊಟಕ್ಕೆ ಕುಳಿತಾಗ ಧರ್ಮಸಿಂಗ್ "ಕೊಲೆಗಾರ ನಮ್ಮಲ್ಲಿಯೇ ಒಬ್ಬನಾಗಿರಬೇಕು" ಎಂದು ನಿರ್ಧರಿಸಿದರು. ಆಶಾ ಒಬ್ಬಳ ಹೊರತು ಉಳಿದವರೆಲ್ಲರೂ ಅದನ್ನು ಸಮರ್ಥಿಸಿದರು.....'

ಡೈರಿಯನ್ನು ಮುಚ್ಚಿ ಸುಧಾ ಮೇಲೆದ್ದಳು.

* * * *

ಸಾಯಂಕಾಲ ಐದು ಘಂಟೆಯ ಸಮಯ. ಎಲ್ಲರೂ ತಿಂಡಿ ಕಾಫಿಗಾಗಿ ಕಾದು ಕೂತಿದ್ದರು. ಶಿವರಾಮನ ತಿಂಡಿ ತೀರ್ಥಗಳು ರುಚಿಯಾಗಿದ್ದವು. ಬೋಂಡ, ಭಾತ್, ಪೂರಿ, ಉಪ್ಪೇರಿ ಮಾಡಿದ್ದ. ಧರ್ಮಸಿಂಗ್ ಕಾಫಿಯ ಬದಲು ಟೀ ಕುಡಿದರು. ಆಶಾ ಕೇವಲ ಹಾಲಿನಿಂದಲೇ ತೃಪ್ತಳಾದಳು. ಯಾರೂ ಹೆಚ್ಚು ಮಾತಾಡಲಿಲ್ಲ. ಎಲ್ಲರೂ ಮೇಲೆದ್ದರು.

ರಾತ್ರಿ ಒಂಬತ್ತು ಗಂಟೆ. ಆಗತಾನೇ ಊಟ ಮುಗಿದಿತ್ತು. ಸುಧಾ ಮೇಲೆದ್ದು, "ನನಗೆ ನಿದ್ರೆ ಬರುತ್ತಿದೆ. ನಾನಿನ್ನು ಮಲಗುತ್ತೇನೆ" ಎಂದಳು.

"ನಾನೂ ಅಷ್ಟೆ" ಎಂದಳು ಆಶಾ. ಇಬ್ಬರೂ ಮಹಡಿಯನ್ನು ಹತ್ತಿ ಹೋದರು. ಅವರ ಜೊತೆಗೆ ಆನಂದ, ಅಜಯರೂ ಹೋಗಿ ಇಬ್ಬರನ್ನೂ ಅವರವರ ಕೋಣೆಗಳಿಗೆ ಬಿಟ್ಟು ಹಿಂದಿರುಗಿದರು. ಧರ್ಮಸಿಂಗ್ ಸಿಗರೇ

ಟೊಂದನ್ನು ಸೇದುತ್ತಾ ಯಾವುದೋ ಪುಸ್ತಕವನ್ನು ಓದುತ್ತಿದ್ದರು. ಅಜಯ, ಆನಂದರು ಇಸ್ಪೀಟು ಆಟದಲ್ಲಿ ಆಸಕ್ತರಾಗಿದ್ದರು. ಮತ್ತೊಂದು ಘಂಟೆ ಕಳೆಯಿತು. ಶಿವರಾಮು ಒಳಗಿನ ಕೆಲಸಗಳನ್ನು ಮುಗಿಸಿಕೊಂಡು ಡ್ರಾಯಿಂಗ್‌ರೂಂಗೆ ಬಂದ. ಎಲ್ಲರಿಗೂ ನಿದ್ರೆ ಬರುವಂತಿತ್ತು. ಧರ್ಮಸಿಂಗ್ ತೂಕಡಿಸಲಾರಂಭಿಸಿದ್ದರು. ಗಡಿಯಾರ ಹತ್ತು ಗಂಟೆ ಬಾರಿಸಿತು. ಪುಸ್ತಕ ವನ್ನು ಕೆಳಗಿಟ್ಟು, ಧರ್ಮಸಿಂಗ್ ಮೇಲೆದ್ದು "ಇನ್ನು ಮಲಗೋಣವೇ ?" ಎಂದರು. ಇಸ್ಪೀಟು ಆಟ ಅಲ್ಲಿಗೇ ಮುಕ್ತಾಯವಾಯ್ತು. ಮೂವರೂ ಮಹಡಿಯ ಮೇಲೇರಿ ಬಂದರು. ತಮ್ಮ ರೂಮಿನ ಬಾಗಿಲಿಗೆ ಬಂದು ನಿಂತ ಧರ್ಮಸಿಂಗ್ ಅಂದರು "ಎಲ್ಲರೂ ಬಾಗಿಲನ್ನು ಭದ್ರವಾಗಿ ಹಾಕಿ ಕೊಂಡು ಮಲಗುವುದೇ ವಾಸಿ." ಅಜಯ ಆನಂದರು ಮೆಲ್ಲನೆ ನಕ್ಕರು. ಆನಂದ, "ಅದನ್ನು ಹೇಳಬೇಕಾಗೇ ಇಲ್ಲ. ಪ್ರತಿಯೊಬ್ಬನಿಗೂ ಅವನ ಜೀವದ ಮೇಲೆ ಆಸೆಯಿದ್ದೇ ಇರುತ್ತದೆ" ಎಂದು ತನ್ನ ರೂಮಿನೊಳಗೆ ಹೋಗಿ ಕೂಡಲೇ ಬಾಗಿಲು ಹಾಕಿಕೊಂಡ. ಅಜಯನಾದರೂ ಅಷ್ಟೆ. ಎಲ್ಲರೂ ಒಳಗೇ ನಡುಗುತ್ತಿದ್ದರು. ರಾತ್ರಿಯನ್ನು ಕ್ಷೇಮವಾಗಿ ಕಳೆದರೆ ಸಾಕು, ಎಂಬುದೇ ಅವರ ಸಧ್ಯದ ಆಕಾಂಕ್ಷೆಯಾಗಿತ್ತು.

* * * *

ಶಿವರಾಮು ಕೆಲಸಗಳನ್ನು ಮುಗಿಸಿ ಎಲ್ಲಾ ಹೊರಬಾಗಿಲುಗಳನ್ನೂ ಹಾಕಿಕೊಂಡು ತನ್ನ ಕೋಣೆಗೆ ಬಂದ. ಒಂದು ಬಾರಿ ಎಲ್ಲವನ್ನೂ ಪರೀಕ್ಷಿ ಸಿದ. ಗೋಡೆಯಲ್ಲಿ ದೊಡ್ಡದೊಂದು ಮಾಡವಿತ್ತು. ಅದರ ಬಾಗಿಲನ್ನು ತೆಗೆದು ನೋಡಿ ಸಂದೇಹವನ್ನು ಪರಿಹರಿಸಿಕೊಂಡು ಮಲಗಲು ಸಿದ್ಧನಾದ. "ಸಧ್ಯ ಇವತ್ತೇನೂ ಇಲ್ಲ .........ಗೊಂಬೆಗಳೆಲ್ಲಾ ಹಾಗೇ ಇವೆ.....ಇನ್ಯಾವ ಅನಾಹುತವೂ ನಡೆಯಲಾರದು. ನಾಳೆಯಾದರೂ ಶ್ಯಾಮಲಾಲ್ ಬಂದರೆ" ಎಂದುಕೊಂಡು ದೀಪ ಆರಿಸಿದ.

* * * *

೧೧

ಬೆಳಗ್ಗೆ ಎದ್ದ ತಕ್ಷಣ ಸ್ವಲ್ಪ ಸುತ್ತಾಡಿಕೊಂಡು ಬರುವ ಅಭ್ಯಾಸ ಅಜಯನಿಗೆ. ಹಾಗೆಯೇ ಇಂದು ಬೆಳಗ್ಗೆಯೂ ಅವನು ಹೊರ ಹೊರಟಿದ್ದ· ಅರ್ಧಘಂಟೆ ಸುತ್ತಾಡಿಕೊಂಡು ಹಿಂತಿರುಗಿದ. ಹಿಂದಿನ ರಾತ್ರಿಯ ಮಳೆಯು ನಿಂತಿತ್ತು. ಆದರೆ ಗಾಳಿ ಮಾತ್ರ ಬಿರುಸಾಗಿತ್ತು. ಆಗಿನ್ನೂ ಆರೂವರೆ ಗಂಟೆಯ ಸಮಯ. ಅಜಯ ಮತ್ತೆ ಬಂದು ಮಲಗಿದ.........ಮತ್ತೆ ಅವನನ್ನು ನಿದ್ರೆ ಆವರಿಸಿತು.

ಎಚ್ಚರವಾದಾಗ ಗಂಟೆ ಆಗಲೇ ಒಂಬತ್ತಾಗಿತ್ತು. ಮತ್ತೆ ತಾನು ಅಷ್ಟು ಹೊತ್ತು ಹೇಗೆ ನಿದ್ರಿಸಿದೆ ಎಂದು ಅವನಿಗೆ ಆಶ್ಚರ್ಯವಾಗಿತ್ತು. ಅದಕ್ಕಿಂತ ಹೆಚ್ಚಾಗಿ ತನ್ನನ್ನು ಎಬ್ಬಿಸಲು ಯಾರೂ ಬರಲಿಲ್ಲವೇಕೆ ಎಂಬ ಯೋಚನೆ ಪ್ರಬಲವಾಯ್ತು. ಅಥವಾ ಯಾರೂ ಇನ್ನೂ ಎದ್ದಿರಲಾರರೆ ?....ಶಿವರಾಮು ನಾದರೂ ಎದ್ದಿರಬೇಕಲ್ಲ ......ಎಂದುಕೊಂಡು ಬಟ್ಟೆ ಹಾಕಿಕೊಂಡು ರೂಮಿ ನಿಂದ ಹೊರಟು ನೇರವಾಗಿ ಆನಂದನ ರೂಮಿಗೆ ಬಂದು ಮುಚ್ಚಿದ್ದ ಬಾಗಿಲನ್ನು ತಟ್ಟಿದ. ಆಗಲೇ ಆನಂದನಿಗೂ ಎಚ್ಚರ. "ಯಾರು ?........" ಒಳಗಿಂದ ಆನಂದನ ಪ್ರಶ್ನೆ.

"ನಾನು........ಅಜಯಕುಮಾರ್." ಧ್ವನಿಯನ್ನು ಗುರ್ತಿಸಿ ಆನಂದ ಬಾಗಿಲನ್ನು ತೆಗೆದು ಅಜಯನನ್ನು ಒಳಗೆ ಕರೆಯುತ್ತಾ—

"ಎಚ್ಚರವೇ ಆಗಲಿಲ್ಲ ಗಂಟೆ ಎಷ್ಟಿರಬಹುದು ?" ಎಂದ.

"ಆಗಲೇ ಒಂಬತ್ತಾಯ್ತು. ಯಾರೂ ಎದ್ದಿರುವಂತಿಲ್ಲ. ರಾತ್ರಿಯ ಮಳೆಯಿಂದ ಛಳಿ ಹೆಚ್ಚಿ ಎಲ್ಲರಿಗೂ ಸೋಮಾರಿತನವುಂಟಾಗಿದೆ."

ಅಜಯ ಆನಂದರಿಬ್ಬರೂ ರೂಮಿನಿಂದ ಹೊರಟು ನೇರವಾಗಿ ಅಡಿಗೆ ಮನೆಗೆ ಬಂದರು. ಅಲ್ಲಿ ತಿಂಡಿ ಕಾಫಿಗಳ ಏರ್ಪಾಡೇ ಕಾಣಲಿಲ್ಲ. ಒಲೆ ಯಲ್ಲಿ ಬೆಂಕಿಯೂ ಇರಲಿಲ್ಲ. ಇಬ್ಬರೂ ಆಶ್ಚರ್ಯದಿಂದ ಮೂಕರಾದರು.

ಅಜಯ "ಏಕೆ ! ಶಿವರಾಮು ಇನ್ನೂ ಎದ್ದೇ ಇಲ್ಲವೇ ? ಹಾಗಾದರೆ ತಿಂಡಿ ಕಾಫಿ ಹನ್ನೊಂದಕ್ಕೇ........ಊಟ ಯಾವಾಗಲೋ ನಾವು ಕಾಣು ವುದು ?" ಎಂದ.

"ಊಟ ತಿಂಡಿಗಳ ಮಾತಿರಲಿ....ಶಿವರಾಮ ಇನ್ನೂ ಎದ್ದಿಲ್ಲವೆಂದರೆ ನಂಬುವಂತಿಲ್ಲ."

"ಎದ್ದು ಎಲ್ಲಾದರೂ ಹೊರಗೆ ಹೋಗಿರಬಹುದೋ....?"

"ನೋಡೋಣ ... ...ಬನ್ನಿ........ಉಳಿದವರನ್ನು ನೋಡಿಕೊಂಡು ಬರೋಣ"

ಇಬ್ಬರೂ ಧರ್ಮಸಿಂಗರ ರೂಮಿಗೆ ಬಂದರು. ಧರ್ಮಸಿಂಗ್ ಆಗ ತಾನೆ ಎದ್ದು "ಷೇವ್" ಮಾಡಿಕೊಳ್ಳುತ್ತಿದ್ದರು. ಆಶಾದೇವಿ ಹೊರಬರಲು ಸಿದ್ಧಳಾಗಿದ್ದಳು. ಆದರೆ ಸುಧಾದೇವಿಯ ರೂಂ ಖಾಲಿಯಾಗಿತ್ತು. ಎಲ್ಲರೂ ಶಿವರಾಮನ ಕೋಣೆಗೆ ಬಂದರು. ಅವನು ಅಲ್ಲೂ ಇರಲಿಲ್ಲ. ಬೆಳಗ್ಗೆಯಿಂದಲೂ ಅವನು ಪತ್ತೆಯಿಲ್ಲ ಎಂಬುದನ್ನು ಕೇಳಿ ಎಲ್ಲರೂ ಆಶ್ಚರ್ಯ ಚಕಿತರಾದರು. ಜೊತೆಗೆ ಸುಧಾದೇವಿಯಿಲ್ಲದಿರುವುದು ಅವರ ಕುತೂಹಲವನ್ನು ಇಮ್ಮಡಿಸಿತ್ತು. ಎಲ್ಲರೂ ಡ್ರಾಯಿಂಗ್‌ರೂಮಿನಲ್ಲಿ ಬಂದು ನಿಂತರು. ಆಶಾದೇವಿ ಸಂದೇಹದ ಧ್ವನಿಯಲ್ಲಿ "ಎಲ್ಲಾದರೂ ಅವಿತುಕೊಂಡಿರಬಹುದೇ ?" ಎಂದಳು.

"ಯಾವ ಪ್ರಯೋಜನಕ್ಕೆ ಅವಿತುಕೊಳ್ಳಬೇಕು. ?" ಧರ್ಮಸಿಂಗರ ಮರು ಪ್ರಶ್ನೆಗೆ ಆಶಾದೇವಿಯಿಂದ ಉತ್ತರ ಬರಲಿಲ್ಲ.

"ಅವನನ್ನು ಈಗಲೇ ಹುಡುಕಬೇಕು"ಎಂದ ಆನಂದ.

"ಆಗಲಿ. ಆದರೆ ಎಲ್ಲರೂ ಒಟ್ಟಿಗೆ ಹೋಗೋಣ. ಒಬ್ಬರನ್ನೊಬ್ಬರು ಅಗಲಿರುವುದು ಬೇಡ" ಎಂದರು, ಧರ್ಮಸಿಂಗ್.

ಎಲ್ಲರೂ ಒಟ್ಟಿಗೆ ಹೊರ ಹೊರಟರು. ಅಷ್ಟರಲ್ಲಿ ಸುಧಾ ಅವಸರವಸರವಾಗಿ ಒಳಗೆ ಬಂದಳು. ಧರ್ಮಸಿಂಗ್ ಅವಳನ್ನು ಕುರಿತು

"ನೀವೊಬ್ಬರೇ ತಿರುಗಾಡಲು ಏಕೆ ಹೊರಟಿರಿ ಸುಧಾದೇವಿ ? ಅದು ಎಷ್ಟು ಅಪಾಯಕಾರಿ ಎಂಬುದನ್ನು ಮರೆತಿರುವಂತಿದೆ !" ಎಂದರು.

ಸುಧಾ ನಗುತ್ತಾ "ಮರೆತಿಲ್ಲ.. ಆದರೆ ಬಹಳ ಎಚ್ಚರಿಕೆ ವಹಿಸಿ ಹೊರಗೆ ಹೊರಟಿದ್ದೆ. ಹವ ಬಹಳ ಹಿತಕರವಾಗಿದೆ" ಎಂದಳು.

"ಶಿವರಾಮನನ್ನೇನಾದರೂ ನೋಡಿದಿರೇನು ?"

"ಇಲ್ಲವಲ್ಲ ! ಏಕೆ ? ಬೆಳಗ್ಗೆಯಿಂದ ಸಾನವನನ್ನು ನೋಡೇ ಇಲ್ಲ." ಎಲ್ಲರೂ ಡೈನಿಂಗ್ ಹಾಲಿಗೆ ಬಂದರು. ಆಶಾಳ ಗಮನ ದುಂಡು ಮೇಜಿನ ಮಧ್ಯದ ಕಡೆಗೆ ಹರಿಯಿತು. ಪಕ್ಕದಲ್ಲಿದ್ದ ಧರ್ಮಸಿಂಗರ ತೋಳನ್ನು ಹಿಡಿದು ಪಿಸುದನಿಯಲ್ಲಿ ಉಸುರಿದಳು.—"ನೋಡಿ ... ಆ ಗೊಂಬೆಗಳು" ಉಳಿದವರ ಗಮನವೂ ಅತ್ತ ತಿರುಗಿತು. ಹಿಂದಿನ ರಾತ್ರಿ ಇದ್ದ ಆರು ಗೊಂಬೆಗಳಲ್ಲಿ ಒಂದು ಮಾಯವಾಗಿ ಐದೇ ಇದ್ದವು. ನಡೆದಿರಬಹುದಾದ ಅನಾಹುತವನ್ನು ಎಲ್ಲರೂ ಊಹಿಸಿದರು. ಶಿವರಾಮನ ಕೊಲೆಯಾಗಿರ ಬೇಕು. ಎಲ್ಲರೂ ಹುಡುಕ ಹೊರಟರು. ಹಿಂದಿನ ಔಟ್‌ಹೌಸಿನ ಕಟ್ಟಿಗೆ ಕೋಣೆಯಲ್ಲಿ ಶಿವರಾಮು ನೆಲದ ಮೇಲೆ ಒರಗಿ ಬಿದ್ದಿದ್ದ. ಪಕ್ಕದಲ್ಲಿ ಭಾರ ವಾದ ಕೊಡಲಿಯೊಂದು ಬಿದ್ದಿತ್ತು. ಅವನ ಕೊರಳಲ್ಲಿ ಆಯುಧದ ಘಾಯ ಸ್ಪಷ್ಟವಾಗಿತ್ತು. ಮುಂದೆ ಸೀಳಿದ ಕಟ್ಟಿಗೆಯ ತುಂಡುಗಳು ಹರಡಿ ದ್ದವು. ಆ ಕೊಡಲಿಯಿಂದಲೇ ಅವನ ಕೊಲೆಯಾಗಿರಬೇಕೆಂದು ನಿರ್ಧರಿ ಸುವುದು ಅವರಿಗೆ ಕಷ್ಟವಾಗಲಿಲ್ಲ. ಎಲ್ಲರೂ ಸ್ತಬ್ಧರಾಗಿ ನಿಂತರು.

* * * *

ಆನಂದ ಮೊದಲು ಬಾಯ್ಬಿಟ್ಟ "ಕೊಲೆಗಾರ ಕೊಡಲಿಯ ಒಂದೇ ಬೀಸಿನಿಂದ ತೀರಿಸಿದ್ದಾನೆ. ಅವನು ಹಿಂದುಗಡೆಯಿಂದ ಬಂದಿರಬೇಕು"

ಅಜಯ ಕೊಡಲಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದ.

ಧರ್ಮಸಿಂಗ್ ಕೇಳಿದರು. "ಹಾಗೆ ಹೊಡೆಯಲು ಹೆಚ್ಚು ಶಕ್ತಿಯ ಅವಶ್ಯಕತೆ ಇದೆಯೆ ಡಾಕ್ಟರ್ ?"

ಆನಂದ ಸುತ್ತಲೂ ಒಂದು ಬಾರಿ ನೋಡಿ ಹೇಳಿದ "ಏನೂ ಇಲ್ಲ. ಒಬ್ಬ ಹೆಂಗಸಿನಿಂದಲೂ ಇದು ಸಾಧ್ಯ." ದೃಶ್ಯದ ಘೋರತೆಯನ್ನು ನೋಡ ಲಾರದೆ ಆಶಾ, ಸುಧಾ ಹೊರಟು ಹೋಗಿದ್ದರು. ಆನಂದ ಮುಂದುವರಿಸಿ

"ಅವರಿಬ್ಬರಲ್ಲಿ ಯಾರಿಗಾದರೂ ಸಾಧ್ಯವೇ ಸರಿ...."

ಅಜಯ ಕೊಡಲಿಯ ಪರೀಕ್ಷೆಯನ್ನು ಮುಗಿಸಿ, "ಅದರಮೇಲೆ ಬೆರ ಳಿನ ಗುರುತುಗಳೇನೂ ಕಾಣುವುದಿಲ್ಲ" ಎಂದ.

"ಕೊಲೆಯಾಗಿ ಎಷ್ಟು ಹೊತ್ತು ಆಗಿರಬಹುದು. ?"

ಆನಂದ ಯೋಚಿಸಿ "ಸುಮಾರು ಮೂರು ಗಂಟೆಗಳಾಗಿರಬಹುದು" ಎಂದ.

"ಅಂದರೆ.... ಆಗಿನ್ನೂ ಆರೂವರೆ ಗಂಟೆಯಿರಬಹುದು......ಬಹುಶಃ ನಾವೆಲ್ಲರೂ ಇನ್ನೂ ಮಲಗಿದ್ದೆವೋ ಏನೋ...."ಎಂದರು ಧರ್ಮಸಿಂಗ್.

ಕೊಲೆಯ ಬಗ್ಗೆ ಹೆಚ್ಚಿಗೆ ವಿಮರ್ಶೆಮಾಡಲು ಯಾರಿಗೂ ಇಷ್ಟವಿರ ಲಿಲ್ಲ. ಯೋಚಿಸಲು ಮಾರ್ಗವೂ ಇರಲಿಲ್ಲ. ಎಲ್ಲರೂ ಸ್ವಲ್ಪ ಹೊತ್ತು ಮೂಕರಾಗಿ ನಿಂತರು.

ಅಜಯ "ಸುಮ್ಮನೇ ಹೀಗೇ ನಿಂತರೆ ಪ್ರಯೋಜನವಿಲ್ಲ".... ಎಂದ.

ಎಲ್ಲರೂ "ಏನು ಮಾಡಬೇಕು" ಎಂಬಂತೆ ಅವನನ್ನು ನೋಡಿದರು. ಅದಕ್ಕೆ ಉತ್ತರ ಕೊಡುವ ಶಕ್ತಿ ಅವನಿಗಿರಲಿಲ್ಲ.

ಆಶಾ ಮತ್ತು ಸುಧಾ ಮತ್ತೆ ಅಲ್ಲಿಗೆ ಬಂದರು. ಆಶಾ, "ಇನ್ನುಮೇಲೆ ಅಡಿಗೆ ತಿಂಡಿಗಳ ಕೆಲಸ ನಮ್ಮ ಪಾಲಿಗೆ ಬಂದಂತಾಯ್ತು. ಸ್ವಲ್ಪ ಸಹಾಯ ಮಾಡಿದರೆ ತಿಂಡಿ ಕಾಫಿ, ಮಾಡುತ್ತೇನೆ. ಆಮೇಲೆ ಅಡಿಗೆ ಮಾತು" ಎಂದಳು. ಅಜಯ ಆನಂದರು ಒಪ್ಪಿಗೆಯ ತಲೆದೂಗಿದರು. ಸುಧಾದೇವಿ ಆಶಾಳ ಸಹಾಯಕ್ಕೆ ಸಿದ್ಧಳಾದಳು. ಎಲ್ಲರೂ ಭವನದ ಕಡೆಗೆ ಹೊರಟರು. ಅಜಯ ಆನಂದರು ಶಿವರಾಮುನ ಶರೀರವನ್ನು ಅವನ ಕೋಣೆಗೆ ಸಾಗಿಸಿ ದರು.

*　　*　　*　　*

ಆನಂದ ಸಣ್ಣ ದನಿಯಲ್ಲಿ ಕೇಳಿದ, "ನಾನು ಏನು ಯೋಚನೆ ಮಾಡುತ್ತಿದ್ದೇನೆ ಗೊತ್ತೆ ?"

"ಏನೇ ಆಗಲಿ, ನಮ್ಮ ಊಹೆಗಳೆಲ್ಲಾ ವ್ಯರ್ಥ." ಅಜಯನ ಉತ್ತರ ದಲ್ಲಿ ನಿರುತ್ಸಾಹ ಸ್ಪಷ್ಟವಾಗಿತ್ತು.

"ಇಲ್ಲ. ಈ ಸಾರಿ ನಾನು ಕೇವಲ ಊಹಿಸುತ್ತಿಲ್ಲ. ಧೃಢವಾಗಿ ನಿರ್ಧರಿಸಿದ್ದೇನೆ.... ಹೆಂಗಸರು ಇಷ್ಟು ಧೈರ್ಯವಾಗಿ ಕೊಲೆಗಳನ್ನು ಮಾಡ ಬಲ್ಲರೆ ಎಂದು ಸಂದೇಹಿಸಿದ್ದೆ. ಆದರೆ ಈಗ ನಿಶ್ಚಯವಾಗಿ ಅವರದೇ ಈ ದುಷ್ಕೃತ್ಯ ಎಂದು ಹೇಳಬಲ್ಲೆ"

"ಅಂದರೆ........ಆಶಾ, ಸುಧಾ ಇಬ್ಬರೂ ಇದರಲ್ಲಿ ಸೇರಿದ್ದಾರೆಂದು ನಿಮ್ಮ ಅಭಿಪ್ರಾಯವೇ ?"

"ಇಲ್ಲ....ಇಬ್ಬರಲ್ಲಿ ನನಗೆ ಆಶಾದೇವಿಯಮೇಲೇ ಅನುಮಾನ, ಇದೇ ಈ ಬೆಳಿಗ್ಗೆ ನಡೆದಿರುವ ಕಗ್ಗೊಲೆಯಿಂದಲೂ ಅವಳ ಮನಸ್ಸು ಕದಡಿಲ್ಲ. ಆಗಲೇ ಅಡಿಗೆ ಮಾಡಲು ಹೊರಟು ಬಿಟ್ಟಿದ್ದಾಳೆ....."

ಅಜಯ ತಲೆಯಲ್ಲಾಡಿಸುತ್ತಾ "ಇರಬಹುದು....ಹೆಂಗಸರನ್ನು ಪೂರ್ಣ ವಾಗಿ ನಂಬುವಂತಿಲ್ಲ. ಆದರೆ ನನ್ನ ಸಂದೇಹ ಸುಧಾದೇವಿಯ ಮೇಲೆ.... ಅವಳಾಡುವ ಮಾತುಗಳನ್ನು ಕೇಳಿದರೆ, ತಾನೇ ವಿಧಿಯ ಪ್ರತಿನಿಧಿಯಂತೆ ಮಾತಾಡುತ್ತಾಳೆ...."

"ಆದರೆ....ಎಲ್ಲ ಕೊಲೆಗಳಿಗೂ ಅವಳೇ ಕಾರಣ ಎಂದು ನಿರ್ಧರಿಸಲು ಸಾಕಷ್ಟು ಕಾರಣಗಳಿವೆಯೇ ?"

"ನಾಲ್ಕರಲ್ಲಿ ಎರಡಂತೂ ಅವಳ ಕೈವಾಡವೆಂದು ನಿರ್ಧರಿಸಬಹುದು. ಉಳಿದೆರಡೂ ಅವಳದೇ ಇರಬಹುದು. ಈ ಬೆಳಗ್ಗೆ ನಾವು ಶಿವರಾಮುನನ್ನು ಹುಡುಕಲು ಹೊರಟಾಗ ಸುಧಾ ಒಬ್ಬಳೇ ಹೊರಗಡೆಯಿಂದ ಬಂದಳು..... ಅವಳು ಆಗ ಎಲ್ಲಿಗೆ ಹೋಗಿದ್ದಳು ? ಏಕೆ ಹೋಗಿದ್ದಳು?"

"ನಿಜ ...ಆದರೆ.... ಶಿವರಾಮು ಕೊಲೆಯಾಗಿದ್ದು ಸುಮಾರು ಆರು ಘಂಟೆಯಲ್ಲಿರಬಹುದು.....ಆಮೇಲೆ ಅಷ್ಟುಹೊತ್ತು ಹೊರಗಡೆ ಏಕೆ ತಿರುಗಾಡಬೇಕು ?"

"ಇನ್ನೊಂದು ವಿಷಯ ಗಮನಿಸಬೇಕು. ನಿಜವಾಗಿಯೂ ಸುಧಾ ನಿರಪರಾಧಿಯಾಗಿದ್ದರೆ....ಒಬ್ಬಳೇ ಹೊರಗಡೆ ತಿರುಗಾಡಿಕೊಂಡು ಬರಲು ಅವಳಿಗೆ ಧೈರ್ಯ ಹೇಗೆ ಬಂದೀತು ?....ಯಾವುದಕ್ಕೂ ಹೆದರುವುದು ಅನವಶ್ಯಕವಾಗಿದ್ದರೆ.... ಅಂದರೆ ತಾನೆ ಸ್ವತಃ ಇವೆಲ್ಲಕ್ಕೂ ಮೂಲವಾಗಿದ್ದರೆ.... ನಿರ್ಭಯವಾಗಿ ತಿರುಗ ಬಲ್ಲಳು....ಅಲ್ಲವೆ ?" ಆನಂದ ಅದನ್ನೊಪ್ಪುವಂತೆ, "ಹೌದೌದು ಅಂದಹಾಗೆ....ಅದನ್ನು ನಾನು ಯೋಚಿಸಲಿಲ್ಲ. ಏನೇ ಆಗಲಿ ನಮ್ಮ ನಮ್ಮಲ್ಲಿ ಪರಸ್ಪರ ಅನುಮಾನವಿಲ್ಲವಲ್ಲ......." ಎಂದ.

"ನಮ್ಮ ನಮ್ಮಲ್ಲಿ ಸಂದೇಹ ಪಡುವುದು ಬೇಡ.. ಆನಂದ್, ನಾವಿಬ್ಬರೂ ಪರಸ್ಪರ ಚೆನ್ನಾಗಿ ಅರ್ಥಮಾಡಿಕೊಂಡಿದ್ದೀವಿ........''

ಇಬ್ಬರೂ ಮೆಲ್ಲನೆ ನಕ್ಕು ಕೆಳಗಿಳಿದು ಡ್ರಾಯಿಂಗ್‌ರೂಮಿಗೆ ಬಂದರು.

* * * *

ಸುಧಾ ಮತ್ತು ಆಶಾ ಅಡಿಗೆ ಮನೆಯಲ್ಲಿ ತಿಂಡಿ ಕಾಫಿ ಮಾಡುವುದರಲ್ಲಿ ತೊಡಗಿದ್ದರು. ಸುಧಾ ಪೂರಿಗಳನ್ನು ಕರಿಯುತ್ತಿದ್ದಳು. ಕಾಫಿ ಡಿಕಾಕ್ಷನ್ನನ್ನು ಆಶಾ ಇಳಿಸುತ್ತಿದ್ದಳು. ಆದರೆ ಅವಳ ಮನಸ್ಸು ಮಾತ್ರ ತಾನು ಅಲ್ಲಿಗೆ ಬಂದಾಗಿನಿಂದ ನಡೆದ ಘಟನೆಗಳತ್ತಲೇ ಹರಿಯುತ್ತಿತ್ತು. ಅಲ್ಲಿ ನಡೆದ ಕೊಲೆಗಳು ಎದೆಯನ್ನು ನಡುಗಿಸುವಂತಹುದು. ತಮ್ಮಲ್ಲಿಯೇ ಒಬ್ಬ ಕೊಲೆಗಾರನಿರಬೇಕೆಂದು ಧರ್ಮಸಿಂಗ್ ನಿರ್ಧರಿಸಿದ್ದಾರೆ. ತಾನು ಸಿಕ್ಕಿರುವ ಆಪತ್ತಿನ ಬಲೆಯನ್ನು ಯೋಚಿಸಿ ಅವಳು ಗಡಗಡನೆ ನಡುಗಿದಳು. ಆದರೆ ಕೊಲೆಗಾರ ಯಾರಿರಬಹುದು ? ಸುಧಾದೇವಿಯ ಧೈರ್ಯವನ್ನು ನೋಡಿ ಅವಳಿಗೆ ಆಶ್ಚರ್ಯಕ್ಕಿಂತಲೂ ಹೆಚ್ಚಾಗಿ ಸಂದೇಹ ಪ್ರಾರಂಭವಾಗಿತ್ತು. ಸುಧಾದೇವಿಯೇ ಇರಬಹುದೇ ?.. ಛೆ! ತನ್ನಂತೆಯೇ ಅವಳೂಅಬಲೆ. ಮತ್ತೆ ಇಂತಹ ಆಪತ್ತಿನಲ್ಲಿ ಅವಳ ಶಾಂತಚಿತ್ತತೆ ಹೇಗೆ ಸಾಧ್ಯ ?

ಸ್ವಲ್ಪಹೊತ್ತು ಯೋಚಿಸಿ ಆಶಾ ಕೇಳಿದಳು. "ಸುಧಾದೇವಿ.... ನಿಮಗೆ ಇಲ್ಲಿರಲು ಭಯವಾಗುವುದಿಲ್ಲವೆ ?... ಊರಿನಲ್ಲಿ ನಿಮ್ಮ ಮನೆಯಲ್ಲಿರುವಂತೆ ಇದ್ದೀರಲ್ಲಾ ?...."

ಸುಧಾ ನಕ್ಕು ನುಡಿದಳು. "ನಮ್ಮ ಮನೆತನದ ಸಂಸ್ಕಾರವಿದು.... ನಮ್ಮ ವಂಶೀಕರೆಲ್ಲಾ ಮಿಲಿಟರಿಯಲ್ಲಿದ್ದವರು. ಧೈರ್ಯ ನನಗೆ ಆಜನ್ಮವಾಗಿ ಲಭಿಸಿದೆ. ಅದೂ ಅಲ್ಲದೆ ನಾನು ಅಂತಹ ಪಾಪಕೃತ್ಯವನ್ನೇನೂ ಮಾಡಿಲ್ಲ. ನಾನೇಕೆ ಹೆದರಬೇಕು ?"

"ಅದೇನೋ ಸರಿ. ಸಹಜವಾಗಿ ಭಯಪಡಲು ಕಾರಣವಿಲ್ಲ. ಆದರೆ ಇಲ್ಲಿನ ಸನ್ನಿವೇಶದಿಂದ........ಇಲ್ಲಿಯವರೆವಿಗೂ ಇಲ್ಲಿ ನಡೆದಿರುವ

ಘಟನೆಗಳನ್ನು ನೆನೆಸಿಕೊಂಡರೆ.... ..."ಅವಳ ಮಾತು ಪೂರ್ತಿಯಾಗಲಿಲ್ಲ. ಅಜಯ ಆನಂದರು ಒಳಗೆಬರುತ್ತಿರುವಂತೆಯೇ, "ತಿಂಡಿ ಕಾಫಿ ಸಿದ್ಧವೋ?" ಎಂದರು. "ಓಹೋ....ನೋಡಿ. ಎಲ್ಲಾ ಪ್ಲೇಟುಗಳಿಗೆ ಹಾಕುತ್ತಿದ್ದೀವಿ ... ಪೂರಿ, ಪಲ್ಯ ಕೇಸರಿಭಾತ್ ಕಾಫಿ ರೆಡಿ."

ಎಲ್ಲರೂ ಡೈನಿಂಗ್ ಹಾಲಿಗೆ ಬಂದರು. ಮಾಮೂಲಿನಂತೆ ತಿಂಡಿ, ಕಾಫಿಗಳ ಸೇವನೆ ಆರಂಭವಾಯ್ತು. ಯಾರೂ ಏನೂ ಮಾತನಾಡಲಿಲ್ಲ.

"ಇನ್ನೂ ಸ್ವಲ್ಪ ಕಾಫಿ ಹಾಕಲೇ ಸುಧಾದೇವಿ ?"

"ನನಗೆ ಇನ್ನೊಂದು ಪೂರಿ....ಹಾಗೇ ಸ್ವಲ್ಪ ಬಿಸ್ಕತ್"

"ಕೇಸರಿಭಾತ್ ಬಹಳ ಚೆನ್ನಾಗಿದೆ."

"ಎಲ್ಲಿ....ಈಕಡೆ ಸ್ವಲ್ಪಸಕ್ಕರೆ __"ಎಲ್ಲಾ ಉಪಚಾರದ ಮಾತುಗಳು. ಎಲ್ಲರ ಮನಸ್ಸಿನಲ್ಲಿಯೂ ನಾನಾ ಯೋಚನೆಗಳು ಮಿಂಚಿ ಮಾಯವಾಗು. ತ್ತಿದ್ದುವು—

"ನನ್ನನ್ನೇಕೆ ಇವನು ಹೀಗೆ ನೋಡುತ್ತಾನೆ. ?"

"ಎಲ್ಲಾ ವಿಚಿತ್ರವಾಗಿದೆ...."

"ಇಲ್ಲಿ ಕೂತಿರುವ ಐದು ಮಂದಿಯಲ್ಲಿ ಒಬ್ಬ ಕೊಲೆಗಾರನೆ ! ಯಾರು?"

"ದೋಣಿ ಯಾವಾಗ ಬರುತ್ತದೆ ?"

ತಿಂಡಿ, ಕಾಫಿ, ಮುಗಿಸಿ ಎಲ್ಲರೂ ಮೇಲೆದ್ದರು.

## ೧೨

ಧರ್ಮಸಿಂಗ್ ತೃಪ್ತಿಯ ತೇಗನ್ನು ತೇಗಿ, "ಈಗಿನ ಪರಿಸ್ಥಿತಿಯನ್ನು ನಾವು ಕುರಿತು ಆಲೋಚಿಸುವುದು ಯುಕ್ತವೆನಿಸುತ್ತದೆ. ಇನ್ನು ಅರ್ಧ ಘಂಟೆಯ ಹೊತ್ತಿಗೆ ಎಲ್ಲರೂ ಡ್ರಾಯಿಂಗ್ ರೂಮಿನಲ್ಲಿ ಬಂದು ಸೇರೋಣವೇ" ? ಎಂದರು

ಎಲ್ಲರೂ ಒಪ್ಪಿಗೆಯನ್ನು ಸೂಚಿಸಿ ಹೊರಡಲನುವಾದರು.

ಆಶಾ ಮೇಜಿನ ಮೇಲಿನ ತಟ್ಟೆಗಳನ್ನು ತೆಗೆಯಲಾರಂಭಿಸಿದಳು. ಅಜಯನೂ ಅವಳ ಸಹಾಯಕ್ಕೆ ಕೈ ಹಾಕಿದ.

ಸುಧಾ ಹೊರಡಲು ಎದ್ದು ಹಾಗೇ ಕುಳಿತು ತಲೆ ಹಿಡಿದುಕೊಂಡಳು. ಧರ್ಮಸಿಂಗ್ "ಯಾಕೆ ಸುಧಾದೇವಿ ?" ಎಂದರು.

"ನಾನೂ ಆಶಾಗೆ ಸಹಾಯ ಮಾಡಬಹುದಾಗಿತ್ತು. ಆದರೆ ಸ್ವಲ್ಪ ತಲೆ ಸುತ್ತುತ್ತಿದೆ. ಈಗ ನನ್ನ ಕೈಲಿ ಯಾವ ಕೆಲಸವೂ ಸಾಧ್ಯವಿಲ್ಲ"

ಆನಂದ "ಪರವಾಗಿಲ್ಲ, ನೀವು ವಿಶ್ರಾಂತಿ ತೆಗೆದುಕೊಳ್ಳಿ ಒಂದು ಡೋಸ್ ಔಷಧಿ ಕೊಡಲೆ ?"ಎಂದ.

"ಬೇಡ....ಬೇಡ....ನನಗೇನೂ ಬೇಡ.... ಕಡಿಮೆಯಾಗುವವರೆಗೂ ಇಲ್ಲೇ ಕೂತಿರುತ್ತೇನೆ"

"ಸರಿ......ನಿಮ್ಮಿಷ್ಟ" ಎಂದು ಹೇಳಿ ಆನಂದ ಹೊರಟು ಹೋದ.

ಆಶಾ ಮತ್ತು ಅಜಯ ಅಡಿಗೆಯ ಮನೆಕಡೆ ಹೊರಟರು. ಸುಧಾ ಡೈನಿಂಗ್ ಹಾಲಿನಲ್ಲಿ ಏಕಾಂಗಿಯಾಗಿ ಉಳಿದಳು.

ತಲೆ ಸುತ್ತುವುದು ಕಡಿಮೆಯಾದಂತಾಗಿ ಅವಳಿಗೆ ನಿದ್ರೆ ಹತ್ತುವಂತೆ ತೋರಿತು. ಹಾಗೆಯೇ ತೂಕಡಿಸುತ್ತಿದ್ದಂತೆ "ಝುಯಿಶ್ ಎಂಬ ಶಬ್ದ ಕೇಳಿಸಿತು. 'ಹಾರಾಡುತ್ತಿರುವ ದುಂಬಿಯ ಶಬ್ದವಿರಬೇಕು' ಎಂದು ಕೊಂಡಳು. ಅವಳ ಊಹೆಯಂತೆ ಒಂದು ಜೇನು ಕಿಟಕಿಯ ಹತ್ತಿರ ಹಾರಾಡುತ್ತಿತ್ತು. ಅದರ ಝೇಂಕಾರ ಅವಳ ಕಿವಿಯಲ್ಲಿ ತುಂಬಿತು.

ರೂಮಿನಲ್ಲಿ ಮತ್ತಾರೋ ಇರುವಂತೆ ಅವಳಿಗೆ ತೋರಿತು. ಕು||ಚಂದ್ರ ಇರಬಹುದೆ ? ಇರಬೇಕು. ಅವಳು ಹೇಗೆ ಬಂದಳು ! ಹಿಂತಿರುಗಿ ನೋಡೋಣ ಎನಿಸಿದರೂ ಅವಳಿಗೆ ತಿರುಗಲು ಆಗಲಿಲ್ಲ. ಕೂಗೋಣ ವೆಂದರೆ ಬಾಯಿ ಬಿಡಲು ಆಗದು. ಅವಳು ಮೂಕಳಂತೆ ಕುಳಿತುಬಿಟ್ಟಳು. ಕುತ್ತಿಗೆ ಮೇಲೆ ಮುಳ್ಳಿನಿಂದ ಚುಚ್ಚಿದಂತಾಯ್ತು. ದುಂಬಿ ಕತ್ತನ್ನು ಕಚ್ಚಿತೋ ಏನೋ....

* * *

ಡ್ರಾಯಿಂಗ್ ರೂಮಿನಲ್ಲಿ ಎಲ್ಲರೂ ಸುಧಾದೇವಿಗೆ ಕಾಯುತ್ತ ಕುಳಿ

ತಿದ್ದರು. ಆಶಾದೇವಿ ಕೇಳಿದಳು. "ನಾನು ಹೋಗಿ ಅವರನ್ನು ಕರೆದು ಕೊಂಡು ಬರಲೇ ?" ಅಜಯ ತಟಕ್ಕನೆ ಹೇಳಿದ "ಒಂದು ನಿಮಿಷ"

ಎಲ್ಲರೂ ಅವನನ್ನು ಕುತೂಹಲದಿಂದ ನೋಡಿದರು.

ಅಜಯ ಮುಂದುವರಿಸಿದ—

"ಇಲ್ಲಿ ನಡೆದಿರುವ ಅನಾಹುತಗಳಿಗೆಲ್ಲಾ ಮೂಲವ್ಯಕ್ತಿಯನ್ನು ಹುಡುಕಲು ಹೆಚ್ಚು ದೂರ ಹೋಗಬೇಕಿಲ್ಲ. ಈಗ ಸರ್‍ರನೆ ಹೋಗಿ ಡ್ರಾಯಿಂಗ್ ರೂಂ ನೋಡಿದರೆ ಸಾಕು....ಖಂಡಿತ ಅವಳೇ ಇದಕ್ಕೆಲ್ಲಾ ಮೂಲ"

"ಆದರೆ ಉದ್ದೇಶವೇನು ?"

"ಧಾರ್ಮಿಕ ಹುಚ್ಚು"

"ಇರಬಹುದು. ನಾನೇನೂ ಹೇಳಲಾರೆ, ಆದರೆ ಸಾಕ್ಷ್ಯಗಳು ಸಾಲದು."

"ನನಗೂ ಒಮ್ಮೊಮ್ಮೆ ಹಾಗೇ ಏನಿಸುವುದು" ಎಂದಳು ಆಶಾ.

"ಆದರೆ ಅಷ್ಟರಿಂದಲೇ ನಿರ್ಧರಿಸುವುದು ಅಸಾಧ್ಯ"—ಆನಂದ ಅನುಮಾನಿಸಿ ನುಡಿದ.

"ಇನ್ನೊಂದು ವಿಷಯ. ಗ್ರಾಮೋಫೋನ್ ರೆಕಾರ್ಡ್ ಪ್ರಸಂಗವಾದ ಮೇಲೆ ಅವಳೊಬ್ಬಳೇ ಒಪ್ಪಿಕೊಳ್ಳಲು ನಿರಾಕರಿಸಿದ್ದು. ಕಾರಣ ಒಪ್ಪಿ ಕೊಳ್ಳಲು ಏನೂ ಇರಲಿಲ್ಲ." ಅಜಯ ತನ್ನ ವಾದವನ್ನು ಸಮರ್ಥಿಸಿದ.

"ಹಾಗೇನೂ ಇಲ್ಲ. ನನ್ನೆದುರಿಗೆ ಅವರು ಒಪ್ಪಿಕೊಂಡರು" ಎಂದಳು ಆಶಾ.

ಧರ್ಮಸಿಂಗ್ ಆಶ್ಚರ್ಯದಿಂದ, "ಏನೆಂದು ಒಪ್ಪಿಕೊಂಡರು ?" ಎಂದರು.

ಸುಧಾ ಹೇಳಿದ ಚಂದ್ರಳ ಕಥೆಯನ್ನು ಕಮಲ ಸಂಗ್ರಹವಾಗಿ ವಿವರಿ ಸಿದಳು.

"ಹನ್ನೊಂದಕ್ಕೆ ಐದು ನಿಮಿಷವಿದೆ. ಎಲ್ಲರೂ ಅಲ್ಲಿಗೇ ಹೋಗೋಣ ಬನ್ನಿ" ಎಂದು ಧರ್ಮಸಿಂಗ್ ಹೊರಟರು.

"ಇದರ ಬಗ್ಗೆ ಏನೂ ಕ್ರಮ ಕೈಗೊಳ್ಳಲಾಗುವುದಿಲ್ಲವೆ ?" ಎಂದ ಅಜಯ.

"ನೋಡೋಣ, ಯಾವುದೂ ನಿರ್ಧಾರಕ್ಕೆ ಬಂದಮೇಲೆ ಮುಂದಿನ ಕ್ರಮವನ್ನು ಆಲೋಚಿಸಬೇಕು." ಎಂದರು ಧರ್ಮಸಿಂಗ್.

ಎಲ್ಲರೂ ಡ್ರಾಯಿಂಗ್ ರೂಮಿಗೆ ಬಂದರು. ಸುಧಾದೇವಿ ಕೂತ ಜಾಗವನ್ನು ಬಿಟ್ಟು ಅಲುಗಾಡಿರಲಿಲ್ಲ. ಕೆಳಗೆ ಬಾಗಿದ ಅವಳ ಮುಖ ನೀಲಿ ಬಣ್ಣಕ್ಕೆ ತಿರುಗಿತ್ತು. ಅಜಯ ಸ್ತಬ್ದನಾಗಿ ನುಡಿದ:

"ಅಯ್ಯೋ! ದೇವರೇ! ಪ್ರಾಣಹಾರಿಹೋಗಿದೆ."

* * * *

ಆನಂದರಾಜ್ ಹತ್ತಿರ ಹೋಗಿ ಅವಳನ್ನು ಚೆನ್ನಾಗಿ ಪರೀಕ್ಷಿಸಿ ನಿಟ್ಟುಸಿರು ಬಿಟ್ಟು ಎದ್ದು ನಿಂತ. ಅವನ ಮುಖದಲ್ಲಿ ಭಯ ಆಶ್ಚರ್ಯ ಗಳು ಸ್ಪಷ್ಟವಾಗಿ ಒಡಮೂಡಿದ್ದವು.

"ಡಾಕ್ಟರೇ, ಅವಳು ಹೇಗೆ ಸತ್ತಳು? ಇಲ್ಲಿಂದ ನಾವು ಹೊರಟಾಗ ಚೆನ್ನಾಗಿಯೇ ಇದ್ದಳು" ಎಂದ ಅಜಯ.

ಆನಂದನ ಗಮನ ಅವಳ ಕತ್ತಿನ ಮೇಲೆ ಆಗಿದ್ದ ಸಣ್ಣ ತೂತಿನ ಕಡೆಗೆ ಹರಿಯಿತು. ಸ್ವಲ್ಪ ಪರೀಕ್ಷಿಸಿ "ಹೈಪೋಡರ್ಮಿಕ್ ಸಿರಿಂಜ್ ಚುಚ್ಚಿದ ಗುರುತದು" ಎಂದ.

ಝೇಂಕಾರ ಮಾಡುತ್ತಾ ಜೇನೊಂದು ಹಾರಾಡುತ್ತ ಬಂದಿತು. ಆಶಾ ಅದರಕಡೆ ಕೈತೋರಿಸಿ, "ಜೇನು! ಅದೇನಾದರೂ...."

ಆನಂದ ಮಧ್ಯೆ ಅವಳನ್ನು ತಡೆದು, "ಛೆ, ಛೆ, ಜೇನು ಕಡಿದರೆ ಯಾರೂ ಸಾಯುವುದಿಲ್ಲ. ಪ್ರಯತ್ನಪೂರ್ವಕವಾಗಿ ಇಂಜಕ್ಷನ್ ಮಾಡ ಲಾಗಿದೆ" ಎಂದ.

ಧರ್ಮಸಿಂಗ್ ಕೇಳಿದರು.. "ಯಾವ ವಿಷವನ್ನು ಉಪಯೋಗಿಸಿರ ಬಹುದು ?"

"ಮೇಲು ನೋಟಕ್ಕೆ ಸಯನೈಡ್ ವಿಷದಂತಿದೆ. ಬಹುಶಃ ಪೊಟ್ಯಾ ಸಿಯಂ ಸಯನೈಡ್ ಇರಬಹುದು"

ಧರ್ಮಸಿಂಗ್ ಶಾಂತವಾಗಿ ನುಡಿದರು, "ಆಲೋಚಿಸುವ ಬುದ್ಧಿ ನಮಗಿನ್ನೂ ಇದೆ. ಇಲ್ಲಿಗೆ ಬರುವಾಗ ಯಾರಾದರೂ ಹೈಪೋಡರ್ಮಿಕ್ ಸಿರಿಂಜ್ ತಂದಿದ್ದರೊ ?"

ಆನಂದ ಕ್ಷಣಕಾಲ ಆಲೋಚಿಸಿ, "ಹೌದು ನಾನು ತಂದಿದ್ದೇನೆ" ಎಂದ.

ಉಳಿದ ಮೂವರು ಅವನನ್ನು ನುಂಗಿಬಿಡುವಂತೆ ಸಂದೇಹಯುಕ್ತ ಕಣ್ಣುಗಳಿಂದ ನೋಡಿದರು. ಅವನು ಮುಂದುವರೆದು:

"ಹೌದು, ಯಾವಾಗಲೂ ನಾನು ಒಂದನ್ನು ಇಟ್ಟುಕೊಂಡೇ ಇರುತ್ತೇನೆ. ಎಲ್ಲಾ ಡಾಕ್ಟರರೂ ಅದನ್ನು ಇಟ್ಟುಕೊಂಡಿರುತ್ತಾರೆ" ಎಂದ.

"ಅದೇನೋ ಸರಿ, ಆದರೆ ಈಗ ಅದು ಎಲ್ಲಿದೆ ?"

"ನನ್ನ ಸೂಟ್‌ಕೇಸಿನಲ್ಲಿದೆ."

"ನಾವೆಲ್ಲಾ ಅದನ್ನು ಪರೀಕ್ಷಿಸಬಹುದು ತಾನೆ ?"

ಆನಂದನ ಮುಖ ಕೋಪದಿಂದ ಕೆಂಪಾಯಿತು. ಮಾತನಾಡದೆ ಅವನು ಮಹಡಿಯ ಕಡೆಗೆ ಹೊರಟ. ಉಳಿದವರು ಅವನನ್ನು ಹಿಂಬಾಲಿಸಿದರು. ಅವನ ಪೆಟ್ಟಿಗೆಯನ್ನು ಖಾಲಿಮಾಡಿ ನೋಡಿದ್ದಾಯಿತು. ಆದರೆ ಹೈಪೋಡರ್ಮಿಕ್ ಸಿರಿಂಜ್ ಅಲ್ಲಿರಲಿಲ್ಲ.

* * * *

"ಯಾರೋ ಅದನ್ನು ತೆಗೆದುಕೊಂಡಿರಬೇಕು". ಉದ್ರಿಕ್ತನಾಗಿ ಅರಚಿದ ಆನಂದ.

ಮೂರು ಜೊತೆ ಕಣ್ಣುಗಳು ಅವನನ್ನು ಸಂದೇಹಪೂರಿತ ದೃಷ್ಟಿಯಿಂದ ನೋಡಿದವು. ಅಸಹಾಯಕ ಧ್ವನಿಯಿಂದ ಆನಂದ ನುಡಿದ:

"ಖಂಡಿತ ಅದನ್ನು ಯಾರೋ ಹೊಡೆದು ಬಿಟ್ಟಿದ್ದಾರೆ"

ಒಂದು ನಿಮಿಷ ಮೌನ ಆವರಿಸಿತು.

ಮತ್ತೆ ಧರ್ಮಸಿಂಗರ ತರ್ಕ ಆರಂಭವಾಯಿತು. "ನಾವು ನಾಲ್ಕು ಜನರಿದ್ದೇವೆ. ನಮ್ಮಲ್ಲಿ ಒಬ್ಬ ಕೊಲೆಗಾರ. ಪರಿಸ್ಥಿತಿ ಅಪಾಯಕಾರಿಯಾಗಿದೆ. ಆದುದರಿಂದ ನಮ್ಮ ರಕ್ಷಣೆಗಾಗಿ ಏನಾದರೂ ಕ್ರಮವನ್ನು ಕೈಗೊಳ್ಳಲೇಬೇಕು. ನಿಮ್ಮಲ್ಲಿ....ಯಾವ ಯಾವ ಔಷಧಿಗಳಿವೆ ಆನಂದ್ ?"

"ನಾಲ್ಕಾರು ಔಷಧಿಗಳಿವೆ. ಅವನ್ನು ನೀವೇ ಪರೀಕ್ಷಿಸಬಹುದು. ಆಸ್ಪ್ರಿನ್, ಬ್ರೋಮೈಡ್, ಕ್ವಿನೈನ್, ಪೆಪ್ಸ್, ಹೆಪಾಟಿಕ್ ಮಿಕ್ಸ್‌ಚರ್ ಇತ್ಯಾದಿ ಅಷ್ಟೆ. ಸಯನೈಡ್‌ನಂತಹ ವಿಷವಸ್ತು ಯಾವುದೂ ನನ್ನಲ್ಲಿಲ್ಲ."

"ಸರಿ, ಅಂತಹ ಸಾಮಾನ್ಯ ಔಷಧಿಗಳಿಂದ ಅಪಾಯವೇನೂ ಇಲ್ಲ. ನಿದ್ರೆಯ ಔಷಧಿಗಳು ನನ್ನ ಹತ್ತಿರವೂ ಇದೆ. ಯಾರಲ್ಲಿ ಏನು ಔಷಧಿ ಯಿದ್ದರೂ ಒಪ್ಪಿಸಿ ಬಿಡುವುದು ಒಳ್ಳೆಯದು......ಅಂದಹಾಗೆ ಅಜಯ ಕುಮಾರ್, ನಿಮ್ಮಲ್ಲಿ ಒಂದು ರಿವಾಲ್ವರ್ ಇರಬೇಕಲ್ಲವೇ ?"

ಅಜಯ ತೀಕ್ಷ್ಣವಾಗಿ ನುಡಿದ: "ಇದ್ದರೇನು ?"

"ಹಾಗಲ್ಲ, ಈ ನಾನಾ ಔಷಧಿಗಳನ್ನೂ ನಮ್ಮಲ್ಲಿರಬಹುದಾದ ಆಯುಧ ಗಳನ್ನೂ ಒಟ್ಟಿಗೇ ಸೇರಿಸಿ ಒಂದು ಕಡೆ ಭದ್ರವಾಗಿಡಬೇಕು. ಆಮೇಲೆ ಎಲ್ಲರೂ ಪರೀಕ್ಷೆಗೆ ಒಳಗಾಗಬೇಕು. ಎಲ್ಲರ ಕೊಠಡಿಗಳನ್ನೂ ಸಾಮಾನು ಗಳನ್ನೂ ಪರೀಕ್ಷಿಸಬೇಕಾಗಿದೆ."

ಅಜಯ ನಗುತ್ತಾ, "ನನ್ನ ರಿವಾಲ್ವರ್ ಕೊಟ್ಟುಬಿಟ್ಟರೆ ನಾನು ಮೂರ್ಖನಾಗುತ್ತೇನೆ. ಆಮೇಲೆ ಆತ್ಮರಕ್ಷಣೆ ಹೇಗೆ ಮಾಡಿಕೊಳ್ಳಲಿ ?" ಎಂದ.

"ಎಲ್ಲರಿಗೂ ಆತ್ಮರಕ್ಷಣೆಯ ಅವಶ್ಯಕತೆ ಇದ್ದೇ ಇದೆ. ಆದರೆ ಈ ಪರಿಸ್ಥಿತಿಯಲ್ಲಿ ನಿಮ್ಮ ಬಳಿ ರಿವಾಲ್ವರ್ ಇದ್ದರೆ ನಾವುಗಳು ಹೇಗೆ ಕ್ಷೇಮ? ಆದುದರಿಂದ ಯಾರಲ್ಲೇ ಆಗಲಿ ಯಾವ ಆಯುಧವಿದ್ದರೂ, ಉಳಿದವರ ಪರಿಸ್ಥಿತಿ ಅಪಾಯಕರವಾಗುತ್ತದೆ. ಸಂದೇಹಕ್ಕೆ ಅವಕಾಶವಾಗಬಾರದು. ಅದಕ್ಕೇ ಹೇಳಿದೆ ಅಷ್ಟೆ"

ಅಜಯ ಒಪ್ಪಿಗೆಯ ತಲೆಯಾಡಿಸಿದ.

"ನಿಮ್ಮ ರಿವಾಲ್ವರ್ ಎಲ್ಲಿದೆ ?"

"ನನ್ನ ಹಾಸಿಗೆಯ ಬಳಿಯಿರುವ ಮೇಜಿನ ಡ್ರಾಯರಿನಲ್ಲಿದೆ ? ಬೇಕಾದರೆ ನಾನು ಹೋಗಿ ಅದನ್ನು ತರುತ್ತೇನೆ."

"ನಾವೆಲ್ಲಾ ಒಟ್ಟಿಗೆ ಹೋದರೆ ಸಂದೇಹಕ್ಕೆ ಅವಕಾಶವೇ ಇರುವುದಿಲ್ಲ".

"ನೀವೆಲ್ಲಾ ಸಂಶಯದಿಂದ ಹುಚ್ಚರಾಗಿದ್ದೀರಿ........ಸರಿ" ಎಂದು ಅಜಯ ಮುಂದುವರೆದ.

ಉಳಿದವರು ಅವನನ್ನು ಹಿಂಬಾಲಿಸಿದರು.

ಅಜಯ ಮೇಜಿನ ಡ್ರಾಯರ್ ಎಳೆದು ನೋಡಿ ದಿಗ್ಭ್ರಾಂತನಾಗಿ ನಿಂತ. ಡ್ರಾಯರ್ ಖಾಲಿಯಾಗಿತ್ತು.

*   *   *   *

ಅಜಯನ ಮುಖ ವಿಸ್ಮಯ, ಭಯದಿಂದ ವಿವರ್ಣವಾಯಿತು. ಸ್ವಲ್ಪ ಹೊತ್ತಿನ ಹಿಂದೆ ಆನಂದನ ಮೇಲೆ ಇದ್ದ ಸಂದೇಹ ಈಗ ಅಜಯನ ಕಡೆಗೆ ತಿರುಗಿತು.

"ರಿವಾಲ್ವರನ್ನು ನಾವು ಹುಡುಕಲೇ ಬೇಕು" ಎಂದರು ಧರ್ಮಸಿಂಗ್, ಎಲ್ಲರೂ ಪರೀಕ್ಷೆಗೆ ಸಿದ್ಧರಾದರು. ಕ್ರಮವಾಗಿ ಅಜಯ, ಧರ್ಮಸಿಂಗ್. ಆನಂದ್ ಮತ್ತು ಆಶಾ ಎಲ್ಲರ ಕೊಠಡಿಗಳನ್ನು ಹುಡುಕಿದ್ದಾಯಿತು. ಯಾರಲ್ಲಿಯೂ ಯಾವ ವಿಧವಾದ ಆಯುಧವೂ ಇರಲಿಲ್ಲ ಧರ್ಮಸಿಂಗ್ ತೃಪ್ತರಾಗಿ ನುಡಿದರು:

"ಈಗ ಒಂದಂತೂ ನಿಸ್ಸಂದೇಹ. ಯಾರಲ್ಲಿಯೂ ಅಪಾಯಕರ ಆಯುಧಗಳಿಲ್ಲ. ಔಷಧಿಗಳೂ ಇಲ್ಲ. ಡಾಕ್ಟರರ ಬಳಿ ಉಳಿದಿರುವ ಔಷಧಿಗಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಯಾರೂ ತೆಗೆಯದಂತೆ ಏರ್ಪಾಡು ಮಾಡಬೇಕು."

ಅಜಯ ಅನುಮಾನದಿಂದ, "ಆದರೆ ಬೀಗದ ಕೈ ಯಾರ ಬಳಿಯಲ್ಲಿರಬೇಕು ?" ಎಂದ.

ಧರ್ಮಸಿಂಗ್ ಉತ್ತರವನ್ನೇನೂ ಕೊಡದೆ ಮಹಡಿಯಿಂದ ಕೆಳಗಿಳಿದರು. ಎಲ್ಲರೂ ಡ್ರಾಯಿಂಗ್ ರೂಮಿನಲ್ಲಿ ಬಂದು ನಿಂತರು. ಅದರ ಗೋಡೆಯಲ್ಲಿ ಹಲವಾರು ಮಾಡಗಳು ಇದ್ದವು. ಒಂದನ್ನು ತೆಗೆದು ಅದರಲ್ಲಿದ್ದ ಒಂದು ಪೆಟ್ಟಿಗೆಯಲ್ಲಿ ಎಲ್ಲಾ ಔಷಧಿಗಳನ್ನೂ ತುಂಬಿ ಅದಕ್ಕೆ ಬೀಗ ಹಾಕಿ ನಂತರ

ಮಾಡದ ಬೀಗಹಾಕಿದರು. ಪೆಟ್ಟಿಗೆಯ ಬೀಗದ ಕೈಯನ್ನು ಅಜಯನಿಗೂ, ಮಾಡದ ಬೀಗದ ಕೈಯನ್ನು ಆನಂದನಿಗೂ ಕೊಟ್ಟು, "ನೀವಿಬ್ಬರೂ, ಸರಿ ಸಮಾನರಾದ ಬಲಶಾಲಿಗಳು. ಒಬ್ಬರಿಂದ ಮತ್ತೊಬ್ಬರು ಬೀಗದ ಕೈಯನ್ನು ಕಿತ್ತುಕೊಳ್ಳಲು ಸಾಧ್ಯವಿಲ್ಲ. ನನಗಾಗಲೀ ಆಶಾದೇವಿಗಾಗಲೀ ಅವನ್ನು ಇಟ್ಟುಕೊಂಡಿರುವುದು ಸಾಧ್ಯವಿಲ್ಲ. ಉಳಿದವರಿಗೆ ತಿಳಿಯದಂತೆ ಬಾಗಿಲು ಒಡೆಯುವುದು ಕಷ್ಟ. ಅಂದಮೇಲೆ ಅವು ಭದ್ರ" ಎಂದರು.

"ಆದರೆ ಅಜಯನ ರಿವಾಲ್ವರ್ ಎಲ್ಲಿದೆ ಎಂಬುದು ಸಮಸ್ಯೆ ಯಾಗಿಯೇ ಉಳಿಯಿತಲ್ಲಾ. ಎಂದಿದ್ದರೂ ಅದರಿಂದ ಅಪಾಯವೇ" ಎಂದಳು ಆಶಾ.

"ಹೌದು ಅದನ್ನು ಹುಡುಕಬೇಕು. ಅದರ ಮಾಲೀಕನಿಗೆ ಅದರ ವಿಷಯ ತಿಳಿದಿರಬೇಕು" ಎಂದ ಆನಂದ.

"ನೀವೇ ನೋಡಿದಂತೆ ಅದು ಕಳುವಾಗಿದೆ. ನನಗೇನು ಗೊತ್ತು ?"

"ಅದನ್ನು ನೀವು ಯಾವಾಗ ನೋಡಿದ್ದಿರಿ ?"

"ನಿನ್ನೆ ರಾತ್ರಿ ಮಲಗುವಾಗ ಅದು ಅಲ್ಲೇ ಇತ್ತು."

ಧರ್ಮಸಿಂಗ್ ತಲೆಯಲ್ಲಾಡಿಸಿ, "ಸರಿಸರಿ....ಈ ಬೆಳಗ್ಗೆ ಅದು ಎಲ್ಲೋ ಕಳುವಾಗಿರಬೇಕು" ಎಂದರು.

ಮತ್ತೆ ರಿವಾಲ್ವರಿಗಾಗಿ ಹುಡುಕಾಟ ಪ್ರಾರಂಭವಾಯಿತು. ಧರ್ಮ ಸಿಂಗರ ಸೂಚನೆಯಂತೆ ಎಲ್ಲರೂ ಒಟ್ಟಿಗೆ ಭವನವನ್ನೆಲ್ಲಾ ಹುಡುಕಿದರು ಕೊನೆಗೂ ಅದರ ಸುಳಿವು ಸಿಗಲೇ ಇಲ್ಲ.

೧೩

ನಾಲ್ಕು ಜನ, ನಾಲ್ಕು ಭಯಗ್ರಸ್ತ ಜನ, ಒಬ್ಬರನ್ನೊಬ್ಬರು ನೋಡುತ್ತಾ ಕುಳಿತಿದ್ದರು. ಎಷ್ಟು ಪ್ರಯತ್ನಿಸಿದರೂ ತಮ್ಮ ಭಯ, ಸಂದೇಹಗಳನ್ನು ಅವರ್ಯಾರಿಗೂ ಮುಚ್ಚಿಡಲಾಗಲಿಲ್ಲ. ಪ್ರತಿಯೊಬ್ಬರೂ ಉಳಿದ ಮೂವರು ತಮ್ಮ ಶತ್ರುಗಳೆಂದು ಭಾವಿಸುತ್ತಿದ್ದರು. ಆ ನಾಲ್ವರು ಶತ್ರುಗಳು ಆತ್ಮರಕ್ಷಣೆಯ ಯೋಚನೆಯೆಂಬ ಏಕಸೂತ್ರದಲ್ಲಿ ಒಂದುಗೂಡಿದ್ದರು. "ನಮ್ಮಲ್ಲೇ ಒಬ್ಬನು........ನಮ್ಮಲ್ಲೇ ಒಬ್ಬನು ಸರಿ, ಆದರೆ

ಯಾರು ?" ಎಂಬ ಪ್ರಶ್ನೆಗೆ ಉತ್ತರ ಮಾತ್ರ ಯಾರಿಗೂ ಹೊಳೆಯಲಿಲ್ಲ. ಧರ್ಮಸಿಂಗ್ ಸೋಫಾದ ಮೇಲೆ ಒರಗಿ ಅರೆಮುಚ್ಚಿದ ಕಣ್ಣುಗಳಿಂದ ಆಗಾಗ್ಗೆ ಸುತ್ತಲೂ ತಿರುಗಿ ನೋಡುತ್ತಿದ್ದರು. ಬಾಯಲ್ಲಿ ಒಂದುಸಿಗಾರ್. ಎದುರಿಗಿದ್ದ ಕಾಫಿ ತಿಂಡಿಗಳೂ ಅವರಿಗೆ ಬೇಕಾಗಿರಲಿಲ್ಲ. ಅಜಯನ ಕಣ್ಣುಗಳು ಕೆಂಪೇರಿದ್ದವು. ಆದರೆ ಆನಂದನ ಇಂದ್ರಿಯಗಳು ಬಹಳತೀಕ್ಷ್ಣವಾಗಿದ್ದವು. ಅವನ ಕಿವಿಗಳು ಹಾಗೂ ಕಣ್ಣುಗಳು ಸೂಕ್ಷ್ಮವಾಗಿ ಕೆಲಸ ಮಾಡುತಿದ್ದವು. ಅಂತಹ ಪರಿಸ್ಥಿತಿಯಲ್ಲೂ ಅವನು ಧೃತಿಗೆಟ್ಟಿರಲಿಲ್ಲ. ಅವನ ಮನಸ್ಸು ಬುದ್ಧಿ ಅಲ್ಲಿನ ಘಟನೆಗಳ ರಹಸ್ಯವನ್ನು ಕಂಡುಹಿಡಿಯಲು ಪ್ರತಿಕ್ಷಣವೂ ಹೋರಾಡುತ್ತಿತ್ತು. ಆಶಾ ಪೂರ್ಣವಾಗಿ ಅಡಗಿಹೋಗಿದ್ದಳು. ಅವಳಗೆಲುವು ಮಾಯವಾಗಿತ್ತು; ಪಂಜರದಲ್ಲಿ ಸಿಕ್ಕಿಬಿದ್ದು ತಪ್ಪಿಸಿಕೊಳ್ಳಲು ಒದ್ದಾಡುವ ಗಿಣಿಯಂತಿದ್ದಳು.

ಆನಂದ, ಮೇಲಿಂದ ಮೇಲೆ ಸಿಗರೇಟು ಸೇದುತ್ತಿದ್ದ. ನಾಲ್ಕಾರು ಕಪ್ ಟೀ ಕುಡಿದ. ಯಾವುದರಿಂದಲೂ ಅವನಿಗೆ ಸಮಾಧಾನವಾಗಲಿಲ್ಲ. ಧರ್ಮಸಿಂಗ್‌ರ ಕಡೆಗೆ ತಿರುಗಿ, "ನಾವು ಕೂತರೆ ಆಗುವುದಿಲ್ಲ. ಏನಾದರೂ ಪ್ರಯತ್ನ ಮಾಡಬೇಕು.... .....ಗುಡ್ಡದ ಮೇಲೆ ಹತ್ತಿ ದೊಡ್ಡ ಉರಿ ಹಚ್ಚಿ ರಾಂಗಾಂವ್ ಜನರಿಗೆ ಸೂಚನೆ ಕೊಡಬೇಕು"

ಅಜಯ "ಉರಿ ? ಹೇಗೆ ಸಾಧ್ಯ! ಈ ಮಳೆಯಲ್ಲಿ" ಎಂದ.

ಮಳೆ ಇನ್ನೂ ಸುಮಾರಾಗಿ ಸುರಿಯುತ್ತಲೇ ಇತ್ತು. ಸಮುದ್ರದ ಭೋರ್ಗರೆಯುವ ಶಬ್ದ ಕೇಳಿ ಬರುತ್ತಿತ್ತು.

"ಹವಾ ಸರಿಯಾದಮೇಲೆ ಏನಾದರೂ ಮಾಡಬಹುದು. ಅಲ್ಲಿಯ ವರೆಗೆ ಕಾಯಲೇ ಬೇಕು" ಎಂದ ಅಜಯ.

"ಆದರೆ ಕ್ಷಣಕ್ಷಣಕ್ಕೂ ಇಲ್ಲಿನ ಅಪಾಯ ಹೆಚ್ಚುತ್ತಿದೆ. ಹೆಚ್ಚು ಕಾಲ ನಾವು ವ್ಯರ್ಥವಾಗಿ ಕಳೆಯುವಂತಿಲ್ಲ" ಎಂದರು ಧರ್ಮಸಿಂಗ್.

ಮಧ್ಯಾನ್ಹದ ಊಟದ ಹೊತ್ತು ಸಮೀಪಿಸಿತು. ಎಲ್ಲರೂ ಒಟ್ಟಿಗೆ ಅಡಿಗೆ ಮನೆಗೆ ಬಂದರು. ಕೇವಲ ಹಸಿವನ್ನಡಗಿಸಲು ಮಾತ್ರ ಅವರಿಗೆ ಊಟ ಬೇಕಿತ್ತು. ಊಟ ಮುಗಿಸಿ ಎಲ್ಲರೂ ಒಟ್ಟಿಗೆ ಡ್ರಾಯಿಂಗ್ ರೂಮಿಗೆ

ಬಂದು ಕುಳಿತರು. ಅಜಯ ಆನಂದ ಇಸ್ಪೀಟು ಆಟ ಆಡಲಾರಂಭಿಸಿದರು. ಧರ್ಮಸಿಂಗ್ ಯಾವುದೋ ಪುಸ್ತಕವನ್ನು ಓದುವುದರಲ್ಲಿ ಆಸಕ್ತರಾಗಿದ್ದರು. ಆಶಾ ಇಸ್ಪೀಟು ಆಟ ನೋಡುತ್ತಾ ಕುಳಿತಳು. ಆದರೆ ಯಾರೂ ತಮ್ಮ ಕೆಲಸದಲ್ಲಿ ತಲ್ಲೀನರಾಗಿರಲಿಲ್ಲ. ಕ್ಷಣ ಕ್ಷಣಕ್ಕು ಅವರ ಮನಸ್ಸು ಇತರರ ಕಡೆಗೆ ತಿರುಗುತ್ತಿತ್ತು. ನಿಮಿಷಗಳು ಅವರಿಗೆ ಯುಗಗಳಂತಾಗಿದ್ದವು. ಪ್ರತಿಯೊಬ್ಬರೂ ಉಳಿದವರನ್ನುಸಂದೇಹಾಸ್ಪದ ದೃಷ್ಟಿಯಿಂದ ನೋಡುತ್ತಿದ್ದರು. ಆದರೆ ಬಾಯಿಬಿಟ್ಟು ತಮ್ಮ ಅಭಿಪ್ರಾಯವನ್ನು ತಿಳಿಸುವುದು ಅವರಿಗೆ ಅಸಾಧ್ಯವಾಗಿತ್ತು. ಗಡಿಯಾರದ ಘಂಟೆ ಐದು ಬಾರಿಸಿತು.

* * * *

ಆಶಾ ಮೇಲೆದ್ದು "ಐದುಘಂಟೆಯಾಯ್ತು. ತಿಂಡಿ ಕಾಫಿ ಯಾರಿಗೂ ಬೇಡವೆ ?" ಎಂದಳು.

ಅಜಯ "ಯಾರಿಗೆ ತಾನೇ ಬೇಡ ? ಎಲ್ಲರಿಗೂ ಬೇಕು" ಎಂದ.

"ಹಾಗಾದರೆ ನಾನು ಹೋಗಿ ಮಾಡಿ ತರುತ್ತೇನೆ .. ....ಅರ್ಧ ಘಂಟೆಯೊಳಗೆ"

ಧರ್ಮಸಿಂಗ್ ಸಂದೇಹಪೂರಿತ ಧ್ವನಿಯಲ್ಲಿ "ನೀವು ಕಾಫಿ ಮಾಡುವುದನ್ನು ನಾವೂ ನೋಡಿದರೆ ತಪ್ಪೇನೂ ಇಲ್ಲವಷ್ಟೆ ?" ಎಂದರು. ಆ ಮಾತಿನ ಧ್ವನಿ ಆಶಾಗೆ ಸುಲಭವಾಗಿ ಅರ್ಥವಾಯ್ತು. ಅವಳು ಅರ್ಥಪೂರ್ಣವಾಗಿ ನಕ್ಕು "ಓಹೋ .......ಆಗಬಹುದು" ಎಂದಳು. ಎಲ್ಲರೂ ಅಡಿಗೆ ಮನೆಗೆ ಹೋದರು. ಕಾಫಿ ತಿಂಡಿ ತಯಾರಾಯ್ತು. ಎಲ್ಲರೂ ಅರೆ ಮನಸ್ಸಿನಿಂದ ತಿಂದು ಮುಗಿಸಿ ಮತ್ತೆ ಡ್ರಾಯಿಂಗ್ ರೂಮಿನಲ್ಲಿ ಬಂದು ಕುಳಿತರು. ಸಂಜೆ ಆರೂವರೆಯ ಸಮಯ. ಸೂರ್ಯಾಸ್ತಮವಾಗಿ ಆಗಲೇ ಕತ್ತಲು ಕವಿಯುತ್ತಾ ಬಂದಿತ್ತು. ಅಜಯ ಎದ್ದು ದೀಪಗಳ ಸ್ವಿಚ್ಚು ಅದುಮಿದ. ಆದರೆ ದೀಪ ಹತ್ತಿಕೊಳ್ಳಲಿಲ್ಲ. ಕ್ಷಣಕಾಲ ಎಲ್ಲರೂ ದಿಗ್ಭ್ರಾಂತರಾದರು.

"ಸರಿ ಸರಿ....ಡೈನಮೋ ಇಂಜಿನ್ ಸ್ಟಾರ್ಟ್ ಮಾಡದೇ ದೀಪ ಹೇಗೆ ಹತ್ತಬೇಕು. ಇದುವರೆಗೂ ಶಿವರಾಮ ಅದನ್ನು ನೋಡಿಕೊಳ್ಳುತ್ತಿದ್ದ" ಎಂದ ಆನಂದ.

"ಇಂಜಿನ್ ಸ್ಟಾರ್ಟ್ ಮಾಡಿ ಬರಬೇಕು" ಎಂದು ಹೇಳಿದ್ದರು ಧರ್ಮಸಿಂಗ್. ಎಲ್ಲರೂ ಇಂಜಿನ್ ರೂಮಿಗೆ ಬಂದರು. ಆದರೆ ಅದರಲ್ಲಿ ಆಯಿಲ್ ಮುಗಿದುಹೋಗಿತ್ತು. ಎಲ್ಲಾದರೂ ಡಿಯಸೇಲ್ ಆಯಿಲ್ ಸಿಗುತ್ತದೆಯೋ ಎಂದು ಹುಡುಕಿ ನೋಡಿದರು. ಎಲ್ಲೂ ಅದು ಸಿಗಲಿಲ್ಲ. ಉಗ್ರಾಣದಲ್ಲಿದ್ದ ಮೇಣದ ಬತ್ತಿಗಳನ್ನುಯತೇಚ್ಛವಾಗಿ ಹಚ್ಚಿ ಉರಿಸಿದರು.

ಹಾಗೆಯೇ ಹೆಚ್ಚು ಕಾಲ ಕೂತಿರಲು ಸಾಧ್ಯವಿಲ್ಲವೆಂದು ಆಶಾಗೆ ತೋರಿತು. ಅದೂ ಅಲ್ಲದೆ ರಾತ್ರಿಯಾಗುವುದರೊಳಗೆ ತನ್ನ ರೂಮನ್ನು ಸೇರಿಕೊಳ್ಳಬೇಕೆಂದೆನಿಸಿತು. ನಾಲ್ಕಾರು ಮೇಣದ ಬತ್ತಿಗಳನ್ನು ಎತ್ತಿ ಕೊಂಡು, ಒಂದನ್ನು ಹಚ್ಚಿಕೊಂಡು ಅವಳು ಡ್ರಾಯಿಂಗ್ ರೂಮಿನಿಂದ ಹೊರಡಲು ಅನುವಾದಳು. ಅಜಯ ಕೇಳಿದ "ನಾನೂ ರೂಮಿನವರೆಗೆ ಬರಲಿ ?" ಆಶಾಗೆ ಏಕಾಂಗಿಯಾಗಿ ಹೋಗುವುದೇ ವಾಸಿ ಎನಿಸಿ "ಪರವಾಗಿಲ್ಲ ಹೋಗುತ್ತೀನಿ" ಎಂದಳು. ಮೆಟ್ಟಲುಗಳನ್ನು ಬಹಳ ಎಚ್ಚರಿಕೆಯಿಂದ ಹತ್ತಿ ತನ್ನ ಕೊಠಡಿಯ ಬಾಗಿಲನ್ನು ತೆರೆದು ಒಳಗೆ ಬಂದಳು. ಕೆಟ್ಟ ವಾಸನೆ ಯೊಂದು ಮೂಗಿಗೆ ತಗುಲಿತು — ಅದು ಸಮುದ್ರದ ಬಳ್ಳಿಗಳ ವಾಸನೆ ಯೊಂದು ತೋರಿತು. ತಕ್ಷಣ ಅವಳಿಗೆ ವಿಶಾಲವಾದ, ಆಳವಾದ ಸಮು ದ್ರದ ನೆನಪಾಯ್ತು. ಕೂಡಲೆ ನೀರಿನಲ್ಲಿ ಮುಳುಗುತ್ತ ಒದ್ದಾಡುತ್ತಿದ್ದ ಶಿವನಾಥನ ಚಿತ್ರ ಅವಳ ಕಣ್ಣಿಗೆ ಕಟ್ಟಿತು. "ನೀನು ವಂಚಕಿ, ಕೊಲೆ ಗಾರ್ತಿ—"ಸಣ್ಣ ದನಿಯಲ್ಲಿ ಯಾರೋ ಉಸುರಿಸಿದಂತೆ——

"ಛೆ ! ಇದೆಲ್ಲಾ ಮನಸ್ಸಿನ ಭ್ರಮೆ......ಇಲ್ಲಿಯಾರೂ ಇಲ್ಲ" ಎಂದು ಮನಸ್ಸಿಗೆ ಧೈರ್ಯ ತಂದುಕೊಂಡು ಮುಂದೆ ನಡೆದಳು. ತಣ್ಣನೆ ಕೊರೆಯುವ ಕೈಯ್ಯೊಂದು ತನ್ನನ್ನು ಮುಟ್ಟಿದಂತಾಯ್ತು. ಕೈಯ್ಯಿಂದ ದೀಪದ ಬತ್ತಿ ಕೆಳಜಾರಿ ಆರಿಹೋಯ್ತು. ಆಶಾ ಕಿಟಾರನೆ ಕಿರಿಚಿದಳು.

* * * *

ಆಶಾ ಒಂದೇ ಸಮನೆ ಚೀರ ತೊಡಗಿದಳು. ಅವಳು ಅತ್ಯಂತ ಭಯದಿಂದ ತಲ್ಲಣಿಸಿ ಹೋಗಿದ್ದಳು. ನಾಲ್ಕಾರು ಕ್ಷಣಗಳು ಯುಗಗಳಂತೆ ಕಳೆಯುವ ಹೊತ್ತಿಗೆ ಮಹಡಿಯ ಮೇಲೆ ಕಾಲು ನಡಿಗೆಯ ಶಬ್ದ ಕೇಳಿ

ಬಂತು......ಬಾಗಿಲಲ್ಲಿ ದೀಪದ ಕುಡಿಗಳು ಗೋಚರಿಸಿದವು. ಮೊದಲು ಅಜಯ ಕೇಳಿದ. "ಆಶಾದೇವಿ.... ..ಹೀಗೇಕೆ ಕೂಗುತ್ತಿದ್ದೀರಿ.......... ಏನಾಯ್ತು ?"

ಅವಳ ಬಾಯಿಂದ ಮಾತುಗಳೇ ಹೊರಡಲಿಲ್ಲ. ಅವಳ ನಾಲಿಗೆ ಒಣಗಿ ಹೋಗಿತ್ತು. ಸ್ವಲ್ಪ ಸುಧಾರಿಸಿಕೊಂಡು "ಯಾರೋ ನನ್ನನ್ನು ಹಿಡಿದುಕೊಂಡಂತಾಯ್ತು....ತಣ್ಣಗೆ ಕೊರೆಯುವ ಕೈಗಳು ...." ಎಂದಳು.

ಮಿತವಾಗಿದ್ದ ಬೆಳಕಿನಲ್ಲಿ ಎಲ್ಲರೂ ಕೊಠಡಿಯನ್ನು ಪರೀಕ್ಷಿಸಿದರು. ಮೆಲ್ಛಾವಣಿಯಿಂದ ಒಂದು ಸಮುದ್ರದ ಬಳ್ಳಿ (Sea-Weed) ನೀಳ ವಾಗಿ ಜೋತುಬಿದ್ದಿತ್ತು. ಅದರ ಹೊರತು ಮತ್ತೇನೂ ವಿಶೇಷ ಕಾಣಲಿಲ್ಲ. ಆನಂದ ಅದರ ಕಡೆಗೆ ತೋರಿಸಿ "ಹೆದರಬೇಡಿ ಆಶಾದೇವಿ.....ಕೇವಲ ಬಳ್ಳಿಯಷ್ಟೆ.....ನಿಮಗೆ ತಗುಲಿದ್ದು.....ಸನ್ನಿವೇಶದ ಪ್ರಭಾವದಿಂದ ನೀವು ಹೆದರಿದ್ದೀರಿ ...... ....."ಎಂದ.

ಆಶಾ "ಹೌದು....ಆದರೆ......" ಅವಳು ನಡುಗುತ್ತಲೇ ಇದ್ದಳು.

ಆ ಬಳ್ಳಿ ಅಲ್ಲಿಗೆ ಹೇಗೆ ಬಂತು ?......ಅದನ್ನು ಯಾರು ಕಟ್ಟಿದರು ? ಎಂಬುದೇ ಅವಳ ಸಮಸ್ಯೆಯಾಗಿತ್ತು. ಆದರೆ ಅವಳು ಅದರ ವಿಷಯ ಪ್ರಸ್ತಾಪ ಮಾಡಲಿಲ್ಲ. ಆದಷ್ಟು ಆ ಪ್ರಸಂಗವನ್ನು ಮರೆಯಲು ಯತ್ನಿಸಿ ದಳು.

ಆನಂದ ಒಂದು ಲೋಟ ನೀರನ್ನು ಆಶಾಗೆ ಕೊಡಲು ಹೋದ. ಅವ ಳಿಗೆ ಏನೋ ಹೊಳೆದಂತಾಗಿ, ಅದನ್ನು ದೂರ ಸರಿಸಿ "ಊಹ್ಞೂಂ........ಈ ನೀರು ಬೇಡ, ಎಲ್ಲಿತ್ತಿದು ?", ಎಂದಳು.

"ಕೆಳಗಿಂದ ತಂದೆ"

"ನನಗೆ ಬೇಡ......ನಾನು ಕುಡಿಯುವುದಿಲ್ಲ"

ಅವಳ ಮಾತಿನ ಅನುಮಾನ ಅವನಿಗೆ ಅರ್ಥವಾಗಿ, "ಸರಿ, ಹಾಗಾ ದರೆ ನೋಡ ಆದರೂ ಕೊಡುತ್ತೇನೆ......ಕುಡಿಯಿರಿ. ಭಯದಿಂದ ಗಂಟಲು ಒಣಗಿದೆ" ಎಂದು ಹೊರ ಹೊರಟ.

ಸ್ವಲ್ಪ ಹೊತ್ತಿನ ಮೇಲೆ ಅವನು ಸೋಡಾ ಸೀಸೆಗಳೊಂದಿಗೆ ಬಂದ. ಗಾಜಿನಲೋಟವನ್ನು ಅವಳೆದುರಿಗೇ ತೊಳೆದು, ಸೋಡಾ ಒಡೆದು ತುಂಬಿ ಕೊಟ್ಟ. ಆಶಾ ಅದನ್ನು ಕುಡಿದು, "ಈಗ ಪರವಾಗಿಲ್ಲ." ಎಂದಳು. ಅವಳ ಮುಖವೂ ಗೆಲುವಾಯಿತು. ಮೊದಲಿನ ಭಯಗ್ರಸ್ಥ ಚಿನ್ಹೆಗಳು ಮಾಯವಾದವು.

ಆಶಾ ಆಶ್ಚರ್ಯದಿಂದ "ಧರ್ಮಸಿಂಗ್ ಎಲ್ಲಿ" ಎಂದಳು. ಅಜಯ ಆನಂದರು ಪರಸ್ಪರ ದಿಟ್ಟಿಸಿ ನೋಡಿದರು. ಅವರಿಗೆ ಅರ್ಥವಾಗಲಿಲ್ಲ.

"ಅವರೂ ನಮ್ಮ ಜೊತೆಯೇ ಬಂದರೆಂದು ತಿಳಿದಿದ್ದೆ." ಎಂದ ಅಜಯ. ಮೂವರ ಕುತೂಹಲವೂ ಕೆರಳಿತು. ಎಲ್ಲರೂ ಸರಸರನೆ ಮಹಡಿಯಿಂದ ಕೆಳಗಿಳಿದು ಬಂದರು. ಆನಂದ ಜೋರಾಗಿ ಕೂಗಿದ......"ಧರ್ಮಸಿಂಗ್" ಉತ್ತರ ಬರಲಿಲ್ಲ. ಎಲ್ಲೆಲ್ಲೂ ನಿಶ್ಶಬ್ದವಾವರಿಸಿತ್ತು. ಆ ನಿರುತ್ತರ ಅವರನ್ನು ತತ್ತರಗೊಳಿಸಿತು. ನೇರವಾಗಿ ಡ್ರಾಯಿಂಗ್ ರೂಮಿಗೆ ಬಂದರು. ಎದುರು ಸೋಫಾದ ಮೇಲೆ ಧರ್ಮಸಿಂಗ್ ಒರಗಿದ್ದರು. ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಎಲ್ಲರೂ ಭಯದಿಂದ ಒಳಗೊಳಗೇ ನಡುಗುತ್ತಿದ್ದರು. ಆನಂದ್ ಅವರನ್ನು ಪರೀಕ್ಷಿಸಿದ; ನಾಡಿ ನೋಡಿ, ಹೃದಯಪರೀಕ್ಷೆ ಮಾಡಿದ. ಅವರ ಹಣೆಯ ಮಧ್ಯಭಾಗದಲ್ಲಿ ಕೆಂಪನೆಯ ಗುರುತಿತ್ತು. ದೇಹದ ಇನ್ನಾವ ಭಾಗದಲ್ಲೂ ಯಾವ ಘಾಯದ ಕಲೆಗಳೂ ಕಾಣಲಿಲ್ಲ. ಪರೀಕ್ಷೆ ಮುಗಿಸಿ ಆನಂದ ಹಿಂದಕ್ಕೆ ಸರಿದು ನಿಂತ. ಅವನ ಮುಖ ಕಪ್ಪಿಟ್ಟು ಹೋಗಿತ್ತು; ಧ್ವನಿ ಒಣಗಿತ್ತು. ಸಣ್ಣ ದನಿಯಲ್ಲಿ ಅವನೆಂದ. "ಗುಂಡಿನೇಟಿಗೆ ತುತ್ತಾಗಿದ್ದಾರೆ."

"ಅಬ್ಬಾ! ಆಶಳ ಬಾಯಿಂದ ಅಚ್ಚರಿಯ ಬಿಡಿಮಾತು ಹೊರಬಿತ್ತು.

" ಹಣೆಗೆ ಸರಿಯಾಗಿ ಗುಂಡುತಾಗಿದೆ. ಒಂದೇ ಏಟಿಗೆ ಪ್ರಾಣ ಹೋಗಿರಬೇಕು." ಎಂದ ಆನಂದ.

ಅಜಯನ ಮುಖದಲ್ಲಿ ವಿಲಕ್ಷಣವಾದ ಹುಚ್ಚು ನಗೆಯೊಂದು ಹೊರಸೂಸಿತು.

"ಧರ್ಮಸಿಂಗ್.... ಇನ್ನು ಮುಗಿಯಿತು, ಅವರ ನಿಷ್ಪಕ್ಷಪಾತ ನ್ಯಾಯ. ನಿರಪರಾಧಿಗಳಿಗೆ ಮರಣದಂಡನೆ ವಿಧಿಸುವ ಕೆಲಸ ಅವರ ಪಾಲಿಗೆ ಇನ್ನಿಲ್ಲ....ರಘುವೀರ ಈಗ ಇಲ್ಲಿದ್ದಿದ್ದರೆ !.... ಇದ್ದಿದ್ದರೆ ಆತ್ಮತೃಪ್ತಿಯಾಗುವವರೆಗೂ ನಗುತ್ತಿದ್ದ........"

ತನ್ನ ಸಣ್ಣ ಉಪನ್ಯಾಸಕ್ಕೆ ತಾನೇ ನಾಚಿ ಅಜಯ ಸುಮ್ಮನಾದ.

ಆಶಾ ಅವನ ಕಿವಿಯಲ್ಲಿ ಉಸುರಿದಳು. "ಈ ಬೆಳಗ್ಗೆ ನೀವು ಊಹಿಸಿದ್ದು ತಪ್ಪಾಯಿತು.....ಅವರೇ ಇದ್ದರೂ ಇರಬಹುದು ಎಂದಿರಲ್ಲ."

"ಹೌದು ನನ್ನ ಊಹೆ ತಪ್ಪಾಯಿತು."

## ೧೪

ಮೂವರೂ ಸೇರಿ ಧರ್ಮಸಿಂಗರ ದೇಹವನ್ನು ಅವರ ಕೊಠಡಿಗೆ ಸಾಗಿಸಿದರು. ನಂತರ ಎಲ್ಲರೂ ಕೆಳಗಿಳಿದು ಡ್ರಾಯಿಂಗ್ ರೂಮಿಗೆ ಬಂದರು. ಅಜಯ ಕೇಳಿದ, "ಈಗೇನು ಮಾಡುವುದು ?"

"ಹಸಿವಾಗಿದೆ. ಏನಾದರೂ ತಿನ್ನಬೇಕು."

ಮೂವರೂ ಒಟ್ಟಿಗೆ ಅಡುಗೆಯ ಮನೆಗೆ ಬಂದರು. ರಾತ್ರಿ ಊಟ ಮುಗಿಯಿತು. ಡಬ್ಬಗಳಲ್ಲಿ ಪ್ಯಾಕ್ ಮಾಡಲಾಗಿದ್ದ ಕೆಲವು ತಿಂಡಿ ಪದಾರ್ಥಗಳನ್ನು ತಿಂದು ಮುಗಿಸಿ ಮತ್ತೆ ಡ್ರಾಯಿಂಗ್ ರೂಮಿಗೆ ಬಂದು ಕುಳಿತರು.

ಆನಂದ, "ನಾವೆಲ್ಲರೂ ಬಹಳ ಜಾಗರೂಕರಾಗಿರಬೇಕು........ ಪರಿಸ್ಥಿತಿ ತೀರಾ ಅಪಾಯಕರವಾಗಿದೆ."

"ಧರ್ಮಸಿಂಗ್‌ರೂ ಹಾಗೇ ಅನ್ನುತ್ತಿದ್ದರು." ಎಂದ ಅಜಯ ವ್ಯಂಗ್ಯವಾಗಿ.

"ಅಂದಹಾಗೆ ಅವರು ಹೇಗೆ ಕೊಲೆಯಾದರು ?" ಎಂದಳು ಆಶಾ.

"ನನಗೆ ತೋರುವ ಮಟ್ಟಿಗೆ ಅದು ಹೀಗಾಗಿರಬೇಕು. ಆಶಾದೇವಿಯ ಚೀರಾಟ ಕೇಳಿ ನಾವಿಬ್ಬರೂ ಅವಳ ಸಹಾಯಕ್ಕೆ ಓಡಿ ಹೋಗಿದ್ದೆವಲ್ಲಾ ಆ ಸಮಯದಲ್ಲಿಯೇ ಆ ಕೃತ್ಯ ನಡೆದಿರಬೇಕು." ಎಂದ ಆನಂದ.

"ನೀವು ಹೇಳುವಂತೆ ಗುಂಡಿನೇಟಿನಿಂದ ಕೊಲೆಯಾಗಿದ್ದರೆ ಪಿಸ್ತೂಲಿನ ಶಬ್ದ ಏಕೆ ಬರಲಿಲ್ಲ ?" ಅಜಯ ಶಂಕಿಸುತ್ತಾ ಕೇಳಿದ.

"ಅದೇನೂ ಆಶ್ಚರ್ಯವಲ್ಲ....ಆಶಾದೇವಿಯ ಚೀರಾಟ.... ನಮ್ಮ ಮನಸ್ಸಿನ ಕಳವಳದ ಪರಿಸ್ಥಿತಿ....ಅವಸರದ ಓಡಾಟ ಇವುಗಳ ಮಧ್ಯೆ ಕೇಳಿಸಿಲ್ಲ. ಅಥವಾ ಶಬ್ದವಾಗದಂತೆ ಗುಂಡುಗಳನ್ನು ಹೊಡೆಯಬಲ್ಲ ಪಿಸ್ತೂಲನ್ನು ಬಳಸಿರಬಹುದು....."

"ಇರಬಹುದು" ಎಂದು ಎಲ್ಲರೂ ಸಮ್ಮತಿ ಸೂಚಿಸಿದರು. ಹತ್ತು ಘಂಟೆಯವರೆಗೂ ಹಾಗೂ ಹೀಗೂ ಕಾಲವನ್ನು ಕಳೆದರು. ಆಮೇಲೆ ಮಲಗಲು ಮಹಡಿಯ ಮೇಲೆ ಹೊರಟರು. ಮೂವರೂ ಒಂದೇ ವರಾಂಡದಲ್ಲಿದ್ದ ತಮ್ಮ ಕೊಠಡಿಗಳ ಮುಂದೆ ನಿಂತರು. ಮೂರು ಬಾಗಿಲುಗಳೂ ಒಟ್ಟಿಗೇ ತೆರದವು....ಮೂವರೂ ಒಳಹೊಕ್ಕರು.....ಮೂರು ಬಾಗಿಲುಗಳೂ ಒಟ್ಟಿಗೇ ಮುಚ್ಚಿಕೊಂಡವು. ಎಲ್ಲರೂ ಒಳಗಿನಿಂದ ಬೀಗ ಹಾಕಿಕೊಂಡರು.

* * * *

ಅಜಯ ಒಳಗೆ ಬಂದು ಮೇಣದ ಬತ್ತಿ ಹಚ್ಚಿಕೊಂಡು ಒಂದು ಬಾರಿ ಕೊಠಡಿಯನ್ನು ಚೆನ್ನಾಗಿ ಪರೀಕ್ಷಿಸಿದ....ಬಟ್ಟೆಗಳನ್ನು ಬದಲಾಯಿಸಿ ಕೈಗಡಿಯಾರ ಬಿಚ್ಚಿಟ್ಟು ಹಾಸಿಗೆಯ ಮೇಲೆ ಹೊರಳಿದ. ಏನೋ ಹೊಳೆದಂತಾಗಿ ಮತ್ತೆ ಎದ್ದು ಕೂತು ಪಕ್ಕದಲ್ಲಿದ್ದ ಮೇಜಿನ ಡ್ರಾಯರನ್ನು ಎಳೆದು ನೋಡಿದ. ಒಳಗೆ ರಿವಾಲ್ವರ್ ಇದ್ದುದನ್ನು ಕಂಡು ವಿಸ್ಮಯದಿಂದ ಸ್ತಬ್ಧನಾದ.

* * * *

ಆಶಾದೇವಿಗೆ ನಿದ್ದೆಯಂತೂ ಬರುವಂತಿರಲಿಲ್ಲ. ಒಬ್ಬಳೇ ಇರಲು ಧೈರ್ಯವೂ ಸಾಲದು. ಆದರೂ ಹೊರಗೆ ರಕ್ಷಣೆ ಇಲ್ಲದೆ ಇರುವುದಕ್ಕಿಂತ ನಾಲ್ಕುಗೋಡೆಗಳ ಮಧ್ಯೆ ತಾನು ಹೆಚ್ಚು ಕ್ಷೇಮವೆಂದು ಅವಳು ಭಾವಿಸಿದ್ದಳು. ಆ ಕೊಠಡಿಯೊಳಕ್ಕೆ ಯಾರೂ ಬರುವಂತಿರಲಿಲ್ಲ. ಬಾಗಿಲುಗಳೂ, ಕಿಟಕಿಗಳೂ ಬಲವಾಗಿದ್ದವು. ಆಹಾರ ನಿದ್ರೆಗಳೂ ಇಲ್ಲದೆ ಹೊರಗಿನಿಂದ ಸಹಾಯ ಬರುವವರೆಗೂ ಅವಳು ಏಕಾಂಗಿಯಾಗಿ ತನ್ನ ಕೊಠಡಿ

ಯಲ್ಲೇ ಇರಲು ಸಾಧ್ಯವೆಂದು ನಂಬಿದ್ದಳು. . ಆದರೆ ಮನಸ್ಸಿನಲ್ಲಿ ತರಂಗ ರೂಪದಲ್ಲಿ ಏಳುತ್ತಿದ್ದ ನೆನಪುಗಳನ್ನು ಅದುಮಲು ಅವಳಿಗೆ ಸಾಧ್ಯವಾಗ ಲಿಲ್ಲ..... ...ಶಿವಕುಮಾರನ ಚಿತ್ರ ಅವಳನ್ನು ಪೀಡಿಸುತ್ತಿತ್ತು.....ಸಂಜೆಯ ಕುಚೋದ್ಯಕ್ಕೆ ಹಿನ್ನೆಲೆ ಏನು ಎಂದು ತರ್ಕಿಸ ತೊಡಗಿದಳು.....ಮತ್ತೆ ಭಯ ಶಂಕೆಗಳು ಅವಳನ್ನು ಮುತ್ತಿದವು. ಬಹಳ ಹೊತ್ತಿನವರೆಗೂ ಅವ ಳಿಗೆ ನಿದ್ದೆ ಬರಲಿಲ್ಲ.

* * *

ಅಜಯ ಹಾಸಿಗೆಯ ಮೇಲೆ ಮಲಗಿ ತಾನು ದ್ವೀಪಕ್ಕೆ ಬಂದಾಗಿ ನಿಂದ ನಡೆದ ಪ್ರತಿಯೊಂದು ಘಟನೆಯನ್ನೂ ನೆನಪಿಗೆ ತಂದುಕೊಳ್ಳಲು ಯತ್ನಿಸುತ್ತಿದ್ದ. ಹಾಗೆ ಮಾಡುವುದರಿಂದ ಈ ಎಲ್ಲಾ ಕೊಲೆಗೂ ಕಾರಣ ನಾದ ವ್ಯಕ್ತಿ ಯಾರೆಂಬುದನ್ನು ನಿರ್ಧರಿಸಲು ಸಾಧ್ಯವಾಗಬಹುದು ಎಂದು ಅವನು ತಿಳಿದಿದ್ದ. ಕೊಲೆಗಾರ, ಮೊದಲು ದ್ವೀಪಕ್ಕೆ ಬಂದ ಒಂಬತ್ತು ಜನ ರಿಂದ ಅನ್ಯನಾಗಿರಬೇಕೆಂದು ಅವನು ಯೋಚಿಸಿದ್ದು. ಆದರೆ ಈಚೀಚೆಗೆ ಕೊಲೆಗಾರ ತಮ್ಮಲ್ಲಿಯೇ ಒಬ್ಬನಾಗಿರಬೇಕೆಂದು ಅವನಿಗೆ ಅನ್ನಿಸುತ್ತಿತ್ತು. ಕೆಲವು ಸಾರಿ ಅವನ ಸಂದೇಹ ದೃಷ್ಟಿ ಆಶಾ ಕಡೆಗೆ ತಿರುಗುತ್ತಿತ್ತು. ಆದರೆ ಹೀಗೆ ಸಾಲುಸಾಲಾಗಿ ಕೊಲೆ ಮಾಡುವಷ್ಟು ಧೈರ್ಯ ಅವಳಿಗಿಲ್ಲವೆಂಬ ಸಂದೇಹಬೇರೆ. ಅಲ್ಲದೆಉದ್ದೇಶ್ಯವಾದರೂ ಏನಿರಬಹುದು? ಆನಂದನಮೇಲೆ ಅವನಿಗೆ ಮೊದಲಿನಿಂದಲೂ ಅನುಮಾನವಿತ್ತು. ಅದುವರೆಗೂ ನಡೆದಿದ್ದ ಆರುಕೊಲೆಗಳಲ್ಲಿ ಮೂರರಲ್ಲಿ ಅವನ ಕೈವಾಡವಿರಬಹುದೆಂದು ನಿರ್ಧರಿಸಲು ಅವನಿಗೆ ಸಾಕಷ್ಟು ಕಾರಣಗಳಿದ್ದವು. ಆದರೆ ಅದರ ಬಲದ ಮೇಲೆ ಉಳಿದ ಮೂವರನ್ನೂಅವನೇ ತೀರಿಸಿರಬೇಕೆಂದು ಊಹಿಸುವುದು ಅಷ್ಟೇನೂ ಉಚಿ ತವಾಗಿ ಕಾಣಲಿಲ್ಲ. ತನ್ನ ಪ್ರಯತ್ನವನ್ನು ಬಿಟ್ಟು ನಿದ್ರಿಸಲು ಯತ್ನಿಸಿದ. ಕೆಳಗೆ ಗಡಿಯಾರ ಒಂದು ಘಂಟೆ ಬಾರಿಸಿತು. ಅವನ ಆಲೋಚನೆಗಳ ಕೊಂಡಿ ಇದ್ದಕ್ಕಿದ್ದಂತೆ ಕಡಿದು ಬಿತ್ತು. ಹೊರಗಡೆ ಏನೋ ಶಬ್ದವಾಗು ತ್ತಿತ್ತು. ಯಾರೋ ಓಡಾಡುತ್ತಿರುವಂತೆ ತೋರಿ ಬಂತು. ಅಜಯನ ಮೈಯೆಲ್ಲಾ ಬೆವರಿತು. ಗಂಟಲು ಒಣಗಿಬಂತು. ಆದರೆ ಕೂಡಲೇ ಅವನು

ಧೈರ್ಯ ತಂದುಕೊಂಡು ಚೇತರಿಸಿಕೊಂಡ. ಮತ್ತೆ ಕಿವಿಗೊಟ್ಟು ಶಬ್ದ ವನ್ನು ಕೇಳಲು ಯತ್ನಿಸಿದ. ಮತ್ತೆ ಮೌನ—ತಾನು ಮೊದಲು ಕಾಲ್ನಡಿಗೆಯ ಶಬ್ದ ಕೇಳಿದ್ದರಲ್ಲಿ ಸಂದೇಹವಿಲ್ಲವೆನಿಸಿತು. ಹೊರಗೆ ಓಡಾಡುತ್ತಿರುವವರು ಯಾರಿರಬಹುದು ? ಈ ನಡುರಾತ್ರಿಯಲ್ಲಿ ಏಕೆ ತಿರುಗಾಡುತ್ತಿರಬೇಕು ? ಅವನೇ ಕೊಲೆಗಾರನಿರಬಹುದೇ ?... ಆನಂದನಿರಬಹುದೇ ? ಆಶಾ ಇಷ್ಟು ಧೈರ್ಯವಾಗಿ ಓಡಾಡಬಲ್ಲಳೇ ? ......ಇಲ್ಲ.... ಇಬ್ಬರೂ ಆಗಿರದೆ ಇದುವರೆಗೂ ಅಜ್ಞಾತದಲ್ಲಿದ್ದು ಕೊಲೆಗಳಿಗೆ ಕಾರಣನಾದ ಬೇರೊಬ್ಬ ವ್ಯಕ್ತಿಯ ಓಡಾಟವಿರಬಹುದೇ?.... ಇರಬಹುದು. ಈಗ ತಾನು ಧೈರ್ಯ ಮಾಡಿದರೆ ರಹಸ್ಯವನ್ನು ಬಯಲುಮಾಡಬಹುದು. ಆದರೆ ಹೇಗೆ ?... ಯಾವುದಾದರೂ ಆಯುಧವಿದ್ದಿದ್ದರೆ ಹೆದರಬೇಕಾಗಿರಲಿಲ್ಲ. .....ತಕ್ಷಣ ಹೊಳೆಯಿತು. .... ತನ್ನ ರಿವಾಲ್ವರ್ ಡ್ರಾಯರ್‌ನಲ್ಲಿ ಮತ್ತೆ ಸಿಕ್ಕಿತ್ತು......ಹಾಗಾದರೆ ತಾವು ಹುಡುಕಿದಾಗ ಅದು ಏಕಿರಲಿಲ್ಲ ?.... ಅದು ಪುನಃ ಅಲ್ಲಿಗೆ ಹೇಗೆ ಬಂತು ?......ಸಮಸ್ಯೆ ಬಗೆ ಹರಿಯಲಿಲ್ಲ.....ಕಾಲಮೀರಿದರೆ ಕೊಲೆಪಾತಕ ತಪ್ಪಿಸಿಕೊಳ್ಳುತ್ತಾನೆ. ಅವನು ನಿರ್ಧರಿಸಿದ—ಕೂಡಲೇ ಹೊರಗೆ ಹೋಗಿ ಕಳ್ಳನನ್ನು ಬೆನ್ನಟ್ಟಬೇಕೆಂದು. ತನ್ನ ರಿವಾಲ್ವರ್‌ನ್ನು ಡ್ರಾಯರಿನಿಂದ ತೆಗೆದುಕೊಂಡು ಪರೀಕ್ಷಿಸಿದ. ಅದರಲ್ಲಿದ್ದ ಹನ್ನೆರಡು ಗುಂಡುಗಳಲ್ಲಿ ಹತ್ತು ಗುಂಡುಗಳು ಹಾಗೇ ಉಳಿದಿದ್ದವು. ಬಾಗಿಲನ್ನು ಶಬ್ದವಾಗದಂತೆ ತೆಗೆದು ವರಾಂಡಕ್ಕೆ ಕಾಲಿಟ್ಟ. ಬೆಳದಿಂಗಳ ಬೆಳಕು ಕಿಟಿಕಿಯ ಮೂಲಕ ಚೆಲ್ಲಿ ಸಾಕಷ್ಟು ಬೆಳಕು ಬಂದಿತ್ತು. ಮಹಡಿಯ ಕೆಳಗಿನ ಹಾಲಿನಲ್ಲಿ ಮತ್ತೆ ಸಪ್ಪಳ ಕೇಳತೊಡಗಿತು. ತಕ್ಷಣ ಅವನಿಗೆ ಒಂದು ಯೋಚನೆ ಹೊಳೆಯಿತು. ಕೆಳಗೆ ಓಡಾಡುತ್ತಿರುವ ವ್ಯಕ್ತಿ ತಮ್ಮ ಮೂವರಲ್ಲೇ ಒಬ್ಬರಾಗಿದ್ದರೆ, ಉಳಿದೆರಡು ಕೊಠಡಿಗಳಲ್ಲಿ ಒಂದು ಖಾಲಿಯಾಗಿರಬೇಕು. ಯಾರ ಕೊಠಡಿ ಖಾಲಿಯಾಗಿರುತ್ತದೆಯೋ ಅವನೇ ಓಡಾಡುತ್ತಿರುವ ವ್ಯಕ್ತಿ, ಅವನೇ ಅಜ್ಞಾತ ಕೊಲೆಗಾರ. ಉಳಿದವರಿಬ್ಬರೂ ಕೊಠಡಿಯಲ್ಲಿಯೇ ಇದ್ದರೆ, ನಾಲ್ಕನೆಯ ವ್ಯಕ್ತಿಯೊಂದು ಅಲ್ಲಿರಬೇಕು .... ಹೇಗೂ ಅವನನ್ನು ಹಿಡಿಯಬಹುದು. ಅದೇ ವರಾಂಡದಲ್ಲಿ

ಮೂವರ ಕೊಠಡಿಗಳೂ ಇದ್ದವು. ಮೊದಲು ಅವನು ನೇರವಾಗಿ ಆನಂದನ ಕೊಠಡಿಯ ಬಳಿ ಬಂದು ಬಾಗಿಲುತಟ್ಟಿದ. ಉತ್ತರ ಬರಲಿಲ್ಲ. ಮತ್ತೆ ತಟ್ಟಿ, "ಆನಂದ್......... ಡಾ|| ಆನಂದ್" ಎಂದು ಕೂಗಿದ. ಆದರೂ ಉತ್ತರ ಬರಲಿಲ್ಲ. ಅಜಯನ ಕೂಗಿಗೆ ಜವಾಬಿಲ್ಲ. "ಸರಿ, ಅವನೇ ಕಳ್ಳನಿರಬೇಕು" ಎಂದುಕೊಂಡು ಆಶಾಳ ಕೊಠಡಿಗೆ ಬಂದು ಬಾಗಿಲು ತಟ್ಟಿದ. ಕೂಡಲೇ ಉತ್ತರಬರಲಿಲ್ಲ. ಮತ್ತೆ ಕೂಗಿದ "ಆಶಾ, ಆಶಾದೇವಿ ನಾನು....ಅಜಯ್" ಬಾಗಿಲು ತೆರೆಯದಿದ್ದರೂ ಉತ್ತರ ಬಂತು "ಏನುಸಮಾಚಾರ?" "ಬಾಗಿಲು ತೆಗೆಯಿರಿ .......ಒಂದು ವಿಚಾರ ಮಾತನಾಡಬೇಕಾಗಿದೆ ..... ...." ಆಶಾ ಅನುಮಾನಿಸಿ, ಧ್ವನಿ ಅಜಯನದೇ ಎಂದು ನಿರ್ಧರಿಸಿದ ಮೇಲೆ ಬಾಗಿಲು ತೆಗೆದಳು.

ಅಜಯ ಒಳಬಂದು, "ಆಶಾದೇವಿ ಕಳ್ಳ ಸಿಕ್ಕಿ ಬೀಳುವಂತಿದೆ ...... ಆನಂದರಾಜ್ ರೂಮಿನಲ್ಲಿಲ್ಲ" ಎಂದ.

ಆಶಾ ಆಶ್ಚರ್ಯದಿಂದ, "ಆ್ಞ,... ಡಾ|| ಆನಂದ್ ಇಲ್ಲವೆಂದು ಹೇಗೆ ಗೊತ್ತು ?"

"ಇಲ್ಲ ನಾನು ಬಾಗಿಲು ತಟ್ಟಿ ನೋಡಿದೆ. ...ಉತ್ತರವೇ ಇಲ್ಲ......... ಇನ್ನೊಂದು ವಿಚಾರ.........ಈಗ ಸ್ವಲ್ಪ ಹೊತ್ತಿನ ಕೆಳಗೆ ಯಾರೋ ಓಡಾಡುತ್ತಿರುವ ಕಾಲಿನ ಸಪ್ಪಳ ಕೇಳಿ ಬರುತ್ತಿತ್ತು.........ನಿಮಗೆ ಕೇಳಿಸಲಿಲ್ಲವೆ ?"

"ಇಲ್ಲ....ನನಗೆ ಕೇಳಿಸಲಿಲ್ಲ."

"ನಿಮಗೆ ಕೇಳಿಸದೆ ಇರಬಹುದು. ಆದರೆ ಅದರಲ್ಲಿ ಸಂದೇಹವೇ ಇಲ್ಲ.........ಆನಂದನೇ ಇರಬೇಕು. ಈ ಸರಿರಾತ್ರಿಯಲ್ಲಿ ಅವನೇಕೆ ತಿರುಗಾಡಬೇಕು.....ಅವನೇ ಕಳ್ಳನಿರಬೇಕು. ನಾನು ಅವನ ಬೆನ್ನಟ್ಟಿ ಹಿಡಿಯುತ್ತೇನೆ. ನೀವು ಬಾಗಿಲು ಹಾಕಿಕೊಂಡು ಇಲ್ಲೇ ಇರಿ" ಎಂದ ಅಜಯ. ಅವನಲ್ಲಿ ವಿಲಕ್ಷಣ ಉತ್ಸಾಹ ಕಂಡು ಬರುತ್ತಿತ್ತು. ಅಜಯನ ಧೈರ್ಯನೋಡಿ ಆಶಾಗೆ ಆಶ್ಚರ್ಯವಾಯಿತು. ಅವಳು, "ಏಕಾಂಗಿಯಾಗಿ ಈ ನಡುರಾತ್ರಿಯಲ್ಲಿ ಕೊಲೆಗಾರನನ್ನು ಹಿಡಿಯುವ ಪ್ರಯತ್ನ ಅರ್ಥವಿಲ್ಲದ

ಹುಚ್ಚು ಸಾಹಸ....ಈಗ ಬೇಡ. ಬೆಳಗ್ಗೆ ನೋಡಿದರಾಯಿತು" ಎಂದಳು. ಆಗ ಹೊಳೆಯಿತು, ಅಜಯನಿಗೂ, ತನ್ನ ಪ್ರಯತ್ನ ಎಷ್ಟು ಅಪಾಯಕಾರಿ ಎಂಬುದು........ತಾನೂ ಕೊಲೆಗಾರನಿಗೆ ಬಲಿಯಾಗುವ ಸಂಭವವೇ ಹೆಚ್ಚು. ಬೆಳಗಾಗುವವರೆಗೂ ಕಾಯುವುದೇ ವಾಸಿ ಎಂದುಕೊಂಡು "ಸರಿ, ಹಾಗಾದರೆ ನಾನೂ ಹೋಗಿ ಮಲಗುತ್ತೇನೆ.........ಬಾಗಿಲುಗಳು ಭದ್ರ" ಎಂದು ಹೊರಟ ಅಜಯ.

* * * *

ಆಶಾ ಬಾಗಿಲುಗಳನ್ನು ಭದ್ರಪಡಿಸಿಕೊಂಡು ಬಂದು ಮಲಗಿದಳು. ಆದರೆ ನಿದ್ರೆ ಬರುವಂತಿರಲಿಲ್ಲ.........ನಾನಾ ಯೋಚನೆಗಳ ಪ್ರವಾಹದಲ್ಲಿ ಅವಳು ತೇಲಿ ಹೋಗುತ್ತಿದ್ದಳು. ಆ ನಡುರಾತ್ರಿಯಲ್ಲಿ ಓಡಾಡುತ್ತಿರುವ ವ್ಯಕ್ತಿ ಯಾರು ? ಆದರೆ ತನಗೇಕೆ ಸಪ್ಪಳ ಕೇಳಿ ಬರಲಿಲ್ಲ.........ತನಗೆ ನಿದ್ರೆ ಬಂದಿತ್ತೇ ? ಅಥವ ಅಜಯನೇ ಸುಳ್ಳಾಡಿರಬಹುದೇ........ ಆನಂದ ರೂಂನಲ್ಲಿರಲಿಲ್ಲ ಎಂದಿದ್ದ ಅಜಯ. ಆದರೆ ಇದು ನಿಜವೆಂದು ನಂಬಬಹುದೇ ? ತಾನೇನೂ ಹೋಗಿ ನೋಡಿರಲಿಲ್ಲ. ಇದೆಲ್ಲಾ ಅಜಯನ ಉಪಾಯವಿರಬಹುದೆ ? ತನ್ನನ್ನು ಕೊಲ್ಲಲು ಪ್ರಯತ್ನ ಮಾಡುತ್ತಿರಬಹುದೆ ? ಆ ಉದ್ದೇಶ್ಯವಿದ್ದರೆ ತನ್ನನ್ನು ಏಕೆ ಹಾಗೆಯೇ ಬಿಟ್ಟ ? ಅವನು ತನ್ನನ್ನು ಏಕೆ ಕೊಲ್ಲಬೇಕು ?....ಅವನೇ ಉಳಿದ ಕೊಲೆಗಳಿಗೂ ಕಾರಣನಾಗಿದ್ದರೆ ! ಆದರೆ ಅವನೇ ಕೊಲೆಗಾರನೆಂದು ನಿರ್ಧರಿಸಲು ಕಾರಣಗಳೇನು ? ಅದರ ಸಾಧ್ಯಾಸಾಧ್ಯತೆಗಳನ್ನು ತರ್ಕಿಸ ತೊಡಗಿದಳು....ಏನೇ ಆಗಲಿ ಅವನ ಬಳಿ ರಿವಾಲ್ವರ್ ಇರುವುದರಿಂದ ಅವನ ಸಾಮೀಪ್ಯ ಅಪಾಯಕಾರಿ ಎಂದೆನಿಸುತ್ತಿತ್ತು. ಸಧ್ಯಕ್ಕೆ ಬೆಳಗಾಗುವವರೆಗೂ ತಾನು ಕ್ಷೇಮವೆಂದು ಭರವಸೆಯಿಂದಿದ್ದಳವಳು.....ಅವಳಿಗೆ ಹಾಗೇ ನಿದ್ರೆ ಬರತೊಡಗಿತು.

* * *

ಆಶಾಗೆ ಎಚ್ಚರವಾದಾಗ ಸುಮಾರು ಏಳು ಘಂಟೆಯಿರಬಹುದು. ಆಗಲೇ ಸೂರ್ಯೋದಯವಾಗಿ ಎಳೆಯ ಕಿರಣಗಳು ಕಿಟಕಿಯ ಮೂಲಕ

ಕೊಠಡಿಯನ್ನು ಬೆಳಗಿಸಿದ್ದವು. ಆಕಾಶ ನಿರ್ಮಲವಾಗಿ ಸುಂದರವಾಗಿತ್ತು. ಆ ಹಗಲನ್ನು ಕಂಡು ಆವಳು ಉತ್ಸಾಹಗೊಂಡಳು. ಎದ್ದು, ಬಟ್ಟೆ ಬದಲಾಯಿಸಿ ಮೇಜಿನ ಮುಂದೆ ಕುಳಿತಳು. ಯಾರೋ ಬಾಗಿಲು ತಟ್ಟಿದಂತಾಯಿತು. ಅಜಯನಿರಬೇಕೆಂದು ನಿರ್ಧರಿಸಿ ಬಾಗಿಲ ಬಳಿ ಬಂದು, "ಯಾರದು ?"ಎಂದಳು.

"ಇನ್ಯಾರು....ನಾನೇ....ಅಜಯ...." ಆನಂದನ ಧ್ವನಿಗೂ ಅಜಯನ ಧ್ವನಿಗೂ ಬಹಳ ವ್ಯತ್ಯಾಸವಿತ್ತು. ಆಶಾ ಧ್ವನಿಯನ್ನು ಗುರ್ತಿಸಿ ಬಾಗಿಲನ್ನು ತೆರೆದಳು.

ಅಜಯ ಒಳಬರುತ್ತಾ, "ನಿದ್ರೆ ಮುಗಿಯಿತೇ ಆಶಾದೇವಿ?" ಎಂದ.

"ನಿದ್ರೆ....ಇಲ್ಲಿಂದ ಹೊರಡುವವರೆಗೂ ಸರಿಯಾಗಿ ನಿದ್ರಿಸುವಂತಿಲ್ಲ"

ಅಜಯ ಮಾತನಾಡದೆ ಸುಮ್ಮನೆ ನಕ್ಕ.

ಆಶಾ ಮತ್ತೆ ಕೇಳಿದಳು, "ರಾತ್ರಿ ಮತ್ತೆ ನಿಮಗೇನಾದರೂ ಶಬ್ದ ಕೇಳಿಸಿತೇ ?''

"ಇಲ್ಲ. ಆದರೆ ಒಂದು ವಿಷಯ ಮಾತ್ರ ಖಚಿತ. ರಾತ್ರಿ ನಾವು ಕೇಳಿದ ಶಬ್ದ ಆನಂದನದೇ.....ಬನ್ನಿ, ಈಗಲೇ ಅವನ ರೂಮಿಗೆ ಹೋಗೋಣ. ಮೊದಲಿನಿಂದಲೂ ನನಗೆ ಅವನ ವಿಷಯದಲ್ಲಿ ಸಂದೇಹವಿತ್ತು."

ಆಶಾ, ಅಜಯರು ನೇರವಾಗಿ ಆನಂದನ ಕೊಠಡಿಗೆ ಬಂದರು. ಬಾಗಿಲ ಬೀಗ ಹಾಕಿತ್ತು....ಅಜಯ ಬಾಗಿಲನ್ನು ಜೋರಾಗಿ ತಟ್ಟಿದ. ಉತ್ತರ ಬರಲಿಲ್ಲ. ಶರಾಯಿ ಜೋಬಿನಿಂದ ರಿವಾಲ್ವರ್ ತೆಗೆದುಕೊಂಡು ಮತ್ತೆ ಬಾಗಿಲು ತಟ್ಟಿದ. ಅವನ ಕೈಯಲ್ಲಿ ರಿವಾಲ್ವರ್ ನೋಡಿ, ಆಶಾ ದೂರ ಸರಿದು ನಿಂತಳು. ಅಜಯ, "ಆಶಾದೇವಿ.... ನನ್ನ ಮೇಲೆ ನೀವು ಪಡುತ್ತಿರುವ ಸಂದೇಹಕ್ಕೆ ಕಾರಣವಿಲ್ಲ....ಹೆದರಬೇಡಿ....ಹತ್ತಿರ ಬನ್ನಿ" ಎಂದ. ಆಶಾ ಹತ್ತಿರ ಹೋಗಲು ನಿರಾಕರಿಸಿ, "ಉಹ್ಞ್ಞ.....ನಿಮ್ಮ ಕೈಯಲ್ಲಿ ಅದು ಇರುವವರೆಗೂ ನನಗೆ ನಂಬಿಕೆಯಿಲ್ಲ. ಅದನ್ನು ಜೋಬಿಗೆ ಸೇರಿಸಿ" ಎಂದಳು.

"ಹಾಗಲ್ಲ. ನಾವು ಈಗ ಶತ್ರುವನ್ನು ಎದುರಿಸಬೇಕಾಗಿದೆ..... ಆದ್ದರಿಂದ ರಕ್ಷಣೆಗೆ ಸಿದ್ಧವಾಗಿರಬೇಕು" ಎಂದ. ಆದರೆ ಅಜಯ ಅದನ್ನು ಜೋಬಿನಲ್ಲಿಡುವವರೆಗೂ ಆಶಾ ಅವನಬಳಿ ಹೋಗಲಿಲ್ಲ. ಅವಳ ಸಂದೇಹ, ಹಠವಾದವನ್ನು ನೋಡಿ ಅಜಯ ನಕ್ಕು, ಮತ್ತೆ ಬಾಗಿಲನ್ನು ತಟ್ಟಿದ. ಬಾಗಿಲು ತೆರೆಯಲಿಲ್ಲ. ಇಬ್ಬರಿಗೂ ಆಶ್ಚರ್ಯವಾಯಿತು.

"ಒಳಗಿಲ್ಲವೆಂದು ತೋರುತ್ತೆ" ಎಂದಳು ಆಶಾ.

"ಇಲ್ಲೇ ಎಲ್ಲೋ ಅಡಗಿರಬೇಕು......ಹುಡುಕೋಣ ಬನ್ನಿ" ಎಂದ ಅಜಯ. ಇಬ್ಬರೂ ಮಹಡಿಯಿಂದ ಕೆಳಗಿಳಿದು ಬಂದರು. ಒಂದೊಂದಾಗಿ ಭವನದ ಎಲ್ಲಾ ಕೊಠಡಿಗಳನ್ನೂ ಹುಡುಕಿದರು. ಹಿಂದಿನ ಔಟ್‌ಹೌಸ್‌ಗಳೆಲ್ಲವನ್ನೂ ಪರೀಕ್ಷಿಸಿದರು. ಅಡುಗೆಮನೆ, ಬಚ್ಚಲುಮನೆ, ಉಗ್ರಾಣ ಎಲ್ಲವನ್ನೂ ನೋಡಿದರು. ಎಲ್ಲೂ ಆನಂದನಿರಲಿಲ್ಲ. ಕೊನೆಗೆ ಡ್ರಾಯಿಂಗ್ ರೂಮಿಗೆ ಬಂದು ನಿಂತರು. ಅಜಯ ತನ್ನ ಬಲಗೈಯನ್ನು ಯಾವಾಗಲೂ ಶರಾಯಿ ಜೋಬಿನಲ್ಲೇ ಇಳಿಬಿಟ್ಟಿದ್ದನ್ನು ಆಶಾ ಉದ್ದಕ್ಕೂ ಗಮನಿಸಿದ್ದಳು. ಆದರೆ ಮತ್ತೆ ರಿವಾಲ್ವರಿನ ವಿಷಯ ಮಾತನಾಡಲಿಲ್ಲ.

"ಅವನು ಇಲ್ಲಿಲ್ಲ. ಎಲ್ಲೋ ಹೊರಗೆ ಅವಿತುಕೊಂಡಿರಬೇಕು.....ಬನ್ನಿ, ದ್ವೀಪವನ್ನೆಲ್ಲಾ ಒಂದು ಸುತ್ತು ಹಾಕಿಕೊಂಡು ಬರೋಣ" ಎಂದ ಅಜಯ.

ಆಶಾ, "ತಿಂಡಿ ತೀರ್ಥ ಮುಗಿಸಿ ಹೋಗೋಣ...." ಎಂದಳು. ಇಬ್ಬರೂ ಅಡುಗೆಮನೆಗೆ ಬಂದರು. ಆಶಾ ಒಲೆ ಹಚ್ಚುತ್ತಾ "ಆನಂದನ ಮೇಲೆ ಅನುಮಾನ ಬರಲು ಕಾರಣವೇನು ?...." ಎಂದಳು.

"ನಿಮಗಿನ್ನೂ ಅನುಮಾನವೇ ?..... ರಾತ್ರಿ ಒಬ್ಬನೇ ಏಕೆ ತಿರುಗಾಡಬೇಕು? ಅಲ್ಲದೆ ನಿಮಗೆ ತಿಳಿದಿರುವಂತೆ ನಾಲ್ಕು ಕೊಲೆಗಳಿಗೆ ಅವನೇ ಕಾರಣನೆಂದು ಸುಲಭವಾಗಿ ನಿರ್ಧರಿಸಬಹುದು."

"ಯಾವ ನಾಲ್ಕು ?"

"ಸರೋಜಾದೇವಿ....ಗೋವಿಂದನಾಯರ್....ಸುಧಾದೇವಿ, ಆಮೇಲೆ ನಿನ್ನೆ ನಡೆದ ಧರ್ಮಸಿಂಗರ ಕೊಲೆ."

ಆಶಾ ಆಶ್ಚರ್ಯದಿಂದ, "ಧರ್ಮಸಿಂಗರ ಕೊಲೆಯಲ್ಲಿ ಅಪನ ಕೈವಾಡ ಇದೆ ಎಂದು ನಿರ್ಧರಿಸಲು ಸಾಧನವೇನಿದೆ ?....ನಾವು ಮೂವರೂ ಒಟ್ಟಿಗೆ ಮೇಲಿದ್ದೆವಲ್ಲಾ ?...."

"ನಿಜ....ಆದರೆ ಮಧ್ಯೆ ಅವನು ನಿಮಗೆ ಸೋಡಾ ತರಲು ಹೋಗಿರ ಲಿಲ್ಲವೇ ? ಆಗಲೇ ನಡೆಸಿರಬಹುದು....ನನಗೆ ಆಮೇಲೆ ಹೊಳೆಯಿತು."

"ಹೌದೌದು....ಅಂದಹಾಗೆ ನಾನು ಅದನ್ನು ಮರೆತಿದ್ದೆ."

ತಿಂಡಿ ಕಾಫಿ ತಯಾರಾಯಿತು.... ಇಬ್ಬರೂ ತಿಂದು ಮುಗಿಸಿ, ಭವನ ದಿಂದ ಹೊರಬಿದ್ದರು. ಭವನದ ಸುತ್ತಲೂ ಇದ್ದ ತೋಟದಲ್ಲೆಲ್ಲಾ ಅಲೆದಾಡಿ ದರು. ಅಲ್ಲಿನ ಪೊದೆ ಪೊಟ್ಟರೆಗಳೆಲ್ಲವನ್ನು ಶೋಧಿಸಿದರು. ಎಲ್ಲೂ ಅವನ ಸುಳಿವಿರಲಿಲ್ಲ.

"ಈಗೇನು ಮಾಡುವುದು ?" ಕೇಳಿದಳು ಆಶಾ.

"ಮಾಡುವುದೇನು ?....ಎಲ್ಲಿದ್ದರೂ ಸರಿ, ಅವನನ್ನು ಹುಡುಕಲೇ ಬೇಕು....ಬನ್ನಿ, ಇಡೀ ದ್ವೀಪವನ್ನು ಸುತ್ತಿ ಬರೋಣ" ಎಂದು ಅಜಯ ಮುನ್ನಡೆದ. ಆಶಾ, ಮರುಮಾತಿಲ್ಲದೆ ಅವನನ್ನು ಅನುಸರಿಸಿದಳು. ದ್ವೀಪ ದೊಡ್ಡದೊಡ್ಡ ಬಂಡೆಗಳಿಂದ ತುಂಬಿತ್ತು. ಬಂಡೆಗಳ ಸಂದಿಗಳೆಲ್ಲ ವನ್ನೂ ಪರೀಕ್ಷಿಸಿದರು. ಅಲ್ಲಲ್ಲೇ ಇದ್ದ ಕೆಲವಾರು ಮರಗಳ ಮೇಲೇ ನಾದರೂ ಕುಳಿತಿರಬಹುದೇ, ಎಂದು ನೋಡಿದರು. ಆದರೆ ಅವಿತುಕೊಳ್ಳ ಬಹುದಾದಂತಹ ಮರಗಳಾವುವೂ ಅಲ್ಲಿರಲಿಲ್ಲ. ಸುಮಾರು ಒಂದೆರಡು ಘಂಟೆ ಹೀಗೆಯೇ ಸುತ್ತಾಡಿ, ಕೊನೆಗೆ ದ್ವೀಪದ ಅತ್ಯಂತ ಎತ್ತರವಾದ ಭಾಗದಲ್ಲಿ ಬಂದು ನಿಂತರು.

"ಒಂದು ವೇಳೆ ಈ ದ್ವೀಪದಿಂದಲೇ ಅವರು ತಪ್ಪಿಸಿಕೊಂಡು ಹೋಗಿರಬಹುದಲ್ಲವೇ ?" ಎಂದು ಕೇಳಿದಳು ಆಶಾ.

ಅಜಯ ನಕ್ಕು "ತಪ್ಪಿಸಿಕೊಳ್ಳುವ ದಾರಿಯೇ ಇಲ್ಲಿಲ್ಲವಲ್ಲ. ಹೊರ ಗಡೆಯಿಂದ ಸಹಾಯ ಬಂದ ಹೊರತು, ಯಾರೂ ಹೇಗೂ ತಪ್ಪಿಸಿಕೊಳ್ಳುವ ಹಾಗಿಲ್ಲ" ಎಂದ.

ಆಶಾ ಅವನ ಕಠಿಣವಾದ ಮಾತನ್ನು ಕೇಳಿ ನಡುಗಿದಳು. ತನ್ನ ಭಯವನ್ನು ತೋರ್ಪಡಿಸದೆ, "ಈಜಿಕೊಂಡು ಹೋಗಿರಬಹುದು."

"ಈಜಿಕೊಂಡು! ಸಮುದ್ರದಲ್ಲಿ ಎರಡು-ಮೂರು ಮೈಲಿ ದೂರ ಈಜಿಕೊಂಡು ಹೋಗುವುದು ಅಷ್ಟೇನೂ ಸುಲಭವಾದ ಕೆಲಸವಲ್ಲ ಆಶಾದೇವಿ"

"ನಿಜ........ಸುಲಭವಲ್ಲ..... .... ಆದರೂ........"

"ಹಾಗೆ ಈಜಲು ಸಮರ್ಥನಾಗಿದ್ದರೆ....ಅದು ಅವನ ಅದೃಷ್ಟ..... ಆದರೆ ಅವನು ಇಲ್ಲಿಗೆ ಬಂದ ಉದ್ದೇಶ್ಯ ಪೂರ್ಣವಾಗಲಿಲ್ಲ."

"ಅಂದರೆ ...?"

"ನಮ್ಮಿಬ್ಬರನ್ನು ಹಾಗೆಯೇ ಉಳಿಸಿ ಹೋದನಲ್ಲ.....ಅದು ನಮ್ಮ ಅದೃಷ್ಟ"

ಆಶಾ ಅವನ ಮಾತನ್ನು ಕಿವಿಗೊಟ್ಟು ಕೇಳುತ್ತಿರಲಿಲ್ಲ. ಅವಳ ದೃಷ್ಟಿ ಪಕ್ಕದಲ್ಲಿನ ಕಡಿದಾದ ಪ್ರಪಾತದಲ್ಲಿ ನಾಟಿತ್ತು. ಅಜಯ ಕೇಳಿದ,

"ಏನದು ?.....ನೀವು ನೋಡುತ್ತಿರುವುದೇನು ?"

"ಅಲ್ಲಿ ನೋಡಿ ... ಏನದು ? ಬಟ್ಟೆಯ ಹೊರೆಯಂತೆ ಕಾಣುತ್ತಿದೆ."

ಅಜಯ ಒಂದು ಸಲ ದಿಟ್ಟಿಸಿ ನೋಡಿ, "ಬನ್ನಿ, ಕೆಳಗಿಳಿದು ಅಲ್ಲಿಗೇ ಹೋಗೋಣ" ಎಂದ. ಇಬ್ಬರೂ ಸರಸರನೆ ಗುಡ್ಡವನ್ನಿಳಿದು ಸಮುದ್ರ ತೀರಕ್ಕೆ ಬಂದರು. ಹತ್ತಿರ ಹೋದಂತೆ ಅವರು ನೋಡಿದ ವಸ್ತು ಸ್ಪಷ್ಟ ವಾಯ್ತು. ಅದು ಬಟ್ಟೆಯ ಹೊರೆಯಾಗಿರಲಿಲ್ಲ. ಮಾನವದೇಹವಾ ಗಿತ್ತು.

ಇಬ್ಬರೂ ಹತ್ತಿರ ಬಂದು ನಿಂತರು. ಆಶಾ ಭಯ ಮಿಶ್ರಿತ ಆಶ್ಚರ್ಯ ದಿಂದ, "ಡಾಕ್ಟರ್-ಆನಂದರಾಜ್!........"ಎಂದಳು. ಅರ್ಧಭಾಗ ನೀರಿ ನಲ್ಲಿ ಮುಳುಗಿದ್ದ ಆನಂದನ ದೇಹ ಮುದ್ದೆಮುದ್ದೆಯಾಗಿತ್ತು. ತಲೆ

ಯೊಡೆದು ವಿಪರೀತ ಘಾಯವಾಗಿತ್ತು. ಇಬ್ಬರೂ ಪರಸ್ಪರ ಕಣ್ಣರಳಿಸಿ ನೋಡಿದರು.

ಆಶಾ ಕೇಳಿದಳು—"ನಿಮ್ಮ ಊಹೆ ಈಗೇನಾಯ್ತು ?"

ಅಜಯ ಉತ್ತರ ಕೊಡದೆ ಮೌನದಿಂದಲೇ ತನ್ನ ಸೋಲನ್ನೊಪ್ಪಿ ಕೊಂಡ.

"ಅವರು ಹೇಗೆ ಸತ್ತಿರಬಹುದು ?....ಅಜಯ್ ?"

"ಮೇಲಿಂದ ಕಾಲುಜಾರಿ ಬಿದ್ದಿರಬೇಕು....ಇಲ್ಲದಿದ್ದರೆ ಹೇಗೆ ಸಾಧ್ಯ ?"

ಆಶಾ ಮತ್ತೆ ಮಾತಾಡಲಿಲ್ಲ. 'ಜಾರಿ ಬೀಳಲು ಕಾರಣವೇನು ?.... ಅದೂ ಇಲ್ಲಿಂದ ಬಿದ್ದಿರಬೇಕಾದರೆ....ಅವರು ಇಲ್ಲಿಗೆ ಬಂದಿರಬೇಕು.... ಇಲ್ಲಿಗೆ ತಾನೆ ಅವರು ಏಕೆ ಬಂದಿರಬಹುದು' ಎಂದು ಯೋಚಿಸತೊಡಗಿದಳು. ಅಜಯನ ವಾದವನ್ನು ಅವಳ ಅಂತರ್ಯ ಒಪ್ಪಲಿಲ್ಲ. 'ಅಥವಾ ಮೇಲಿಂದ ಯಾರಾದರೂ ನೂಕಿರಬಹುದೆ ? ಹಾಗಾದರೆ ನೂಕಿದವರು ಯಾರು ?.... ತಾನಂತೂ ಅಲ್ಲ ಅಂದಮೇಲೆ ಉಳಿದವನು ಅಜಯ. ...ಅಜಯನೇ ನೂಕಿರಬೇಕು...ರಾತ್ರಿ ತನ್ನಲ್ಲಿಗೆ ಬಂದು ಹೇಳಿದ್ದೆಲ್ಲಾ ಕಟ್ಟುಕತೆಯಿರಬೇಕು. ...ಅಜಯನೇ ಕೊಲೆಗಾರನಿರಬೇಕು' ಎಂದು ನಿರ್ಧರಿಸಿದಳು. ಆದರೂ ಸಂದೇಹವನ್ನು ಮರೆಮಾಚಿಕೊಂಡು "ಇರಬಹುದು.....ಕಾಲುಜಾರಿ ಬಂಡೆಯ ಮೇಲೆ ಬಿದ್ದಿರಬೇಕು" ಎಂದಳು. ಒಂದು ನಿಮಿಷ ಮೌನ ಆವರಿಸಿತು. ಆಶಾ, "ಅವರ ದೇಹವನ್ನು ಭವನದೊಳಗೆ ಸಾಗಿಸೋಣ ಬನ್ನಿ" ಎಂದಳು. "ಎಲ್ಲಿ ಬಿದ್ದಿದ್ದರೂ ಒಂದೆ.... ಹ್ಞಾ, ಆಗಲಿ ಬನ್ನಿ ಸಹಾಯಕ್ಕೆ" ಎಂದು, ಅಜಯ ತಲೆಯನ್ನು ಹಿಡಿದೆತ್ತಲು ಬಾಗಿದ. ಆವಳ ದೃಷ್ಟಿ ಅಜಯನ ಬಲಜೇಬಿನಲ್ಲಿದ್ದ ರಿವಾಲ್ವರಿನ ಮೇಲೆ ಬಿತ್ತು. ಮರುಕ್ಷಣದಲ್ಲಿ ಆಶಾ ಮೂರು ಗಜ ದೂರ ಸರಿದು ನಿಂತಳು. ಅಜಯ ತಿರುಗಿ ನೋಡಿ ಮೂಕನಂತೆ ನಿಂತ. ತನ್ನ ರಿವಾಲ್ವರನ್ನು ಅವಳು ಕೈಲಿ ಹಿಡಿದು ನಿಂತದ್ದನ್ನು ನೋಡಿ ದಿಗ್ಭ್ರಾಂತನಾದ.

ತಾನು ಕೆಳಬಾಗಿದಾಗ ಆಶಾ ತನ್ನ ರಿವಾಲ್ವರನ್ನು ಅಪಹರಿಸಿರಬೇಕೆಂದು ಊಹಿಸಿದ. ಅವಳ ವರ್ತನೆ ಅವನಿಗೆ ಅರ್ಥವಾಗಲಿಲ್ಲ.

"ಆಶಾದೇವಿ.... ಇದೇನು ... ನಿಮ್ಮ ವರ್ತನೆ ವಿಚಿತ್ರವಾಗಿದೆ?" ಎಂದ. ಆಶಾ ನಗುತ್ತಾ "ವಿಚಿತ್ರವಲ್ಲ ... ಉಚಿತವಾಗಿದೆ. ನಿಮ್ಮಂತಹ ನಿಷ್ಕರುಣ ಕೊಲೆಗಾರರು ಬದುಕಿರುವುದು ಯಾರಿಗೂ ಕ್ಷೇಮವಲ್ಲ" ಎಂದಳು.

"ನಾನು ಕೊಲೆಗಾರನಲ್ಲ .. ಆಶಾದೇವಿ... ನನ್ನ ಮಾತು ಕೇಳಿ" ಎಂದು ಮುಂದೆ ನುಗ್ಗಿದ. ಆಶಾಳ ಬೆರಳುಗಳು ರಿವಾಲ್ವರಿನ ಕುದುರೆಯನ್ನು ಒತ್ತಿದವು. ಅಜಯನ ಮೇಲೆ ಗುಂಡಿನ ಸುರಿಮಳೆ ಕರೆಯಿತು. ಅಜಯ ದೊಪ್ಪನೆ ನೆಲಕ್ಕೆ ಬಿದ್ದ....

*　　　　*　　　　*

ಅಜಯ ಗುಂಡಿನೇಟಿಗೆ ಬಲಿಯಾದನೆಂದು ನಿರ್ಧರಿಸಿದಮೇಲೆ ಆಶಾಳ ಮನಸ್ಸಿಗೆ ಧೈರ್ಯ ಬಂತು ಒಡನೆಯೇ 'ತಾನು ಮಾಡಿದ್ದು ಸರಿಯೇ ?' ಎಂಬ ಯೋಚನೆ ಅವಳನ್ನು ಕಾಡಿತು. ಕೂಡಲೇ ಅವಳ ಬುದ್ಧಿ ಉತ್ತರ ಕೊಟ್ಟಿತು 'ಸರಿ.... ಇಲ್ಲದಿದ್ದರೆ ನಿನ್ನ ಪ್ರಾಣ ಅಪಾಯಕ್ಕೀಡಾಗುತ್ತಿತ್ತು' ಎಂದು. 'ಹೌದು. ಏಳು ಜನರನ್ನು ಕೊಂದ ಅಜಯ ತನ್ನನ್ನು ಬಿಡುತ್ತಿದ್ದನೆ ?.... ಹಾಗಾದರೆ ಎಲ್ಲರನ್ನೂ ಕೊಂದವನು ಅಜಯನೇ ? ಹೇಗೆ ಗೊತ್ತು ? ... ಆನಂದನನ್ನಂತೂ ಅವನೇ ನೂಕಿರಬೇಕು.... ತಾನು ಮಾಡಿದ್ದು ಸರಿಯೇ ಆಯ್ತು, ಇನ್ನಾದರೂ ಕ್ಷೇಮವಾಗಿರಬಹುದು, ಯಾರ ಭಯವೂ ಇನ್ನಿಲ್ಲ' ಎಂದುಕೊಂಡಳು. ಭಯಂಕರವಾದ ದೊಡ್ಡ ಕನಸಿನಿಂದ ಎಚ್ಚರವಾದ ತೃಪ್ತಿ ಅವಳಲ್ಲಿ ಮೂಡಿತ್ತು.

'ಈಗೇನು ಮಾಡುವುದು ? ... ಹೊರಗಿನಿಂದ ಸಹಾಯ ಬರುವವರೆಗೂ ಹೀಗೇ ಕೂತಿರಬೇಕು. ಆದರೆ ಸಹಾಯಕ್ಕೆ ಬರುವವರು ಯಾರು? ಯಾವುದಾದರೂ ದೋಣಿ ಕಂಡರೆ, ಸನ್ನೆ ಮಾಡಿ ಕರೆಯಬಹುದು. ಹೌದು.... ಅಲ್ಲಿಯವರೆಗೂ ನಿದ್ರೆ ಆಹಾರಗಳಿಲ್ಲದೆ ಕಾಲ ಕಳೆಯಬೇಕು. ಅದೇನೂ ಕಷ್ಟವಲ್ಲ. ಎಂದುಕೊಂಡಳು. ಸ್ವಲ್ಪ ಹೊತ್ತು ಹಾಗೇ ಕಾಲ

ಕಳೆದಳು. ನಿಮಿಷ ನಿಮಿಷವೂ ಯುಗಗಳಂತೆ ಭಾಸವಾದವು. ಮಧ್ಯಾನ್ಹವೂ ಕಳೆಯಿತು. ಹೊಟ್ಟೆಗೇನೂ ಇಲ್ಲದೆ ಕಾಲ ಕಳೆಯುವುದು ಕಷ್ಟವೆನಿಸಿತು. 'ತಿನ್ನಲು ಏನಾದರೂ ತರಬೇಕು, ಭವನದಿಂದ' ಎಂದುಕೊಂಡಳು. ಆದರೆ ಮೊದಲು ಅವಳಿಗೆ ಏಕಾಂಗಿಯಾಗಿ ಅಲ್ಲಿಗೆ ಹೋಗಲು ಧೈರ್ಯವಾಗಲಿಲ್ಲ. ಆಮೇಲೆ ಅವಳಿಗೆನಿಸಿತು. "ತಾನೇಕೆ ಹೆದರಬೇಕು? ದ್ವೀಪದಲ್ಲಿ ತನ್ನ ಹೊರತು ಮತ್ತ್ಯಾರೂ ಇಲ್ಲ. ಇದ್ದವರೆಲ್ಲರೂ ಸತ್ತುಬಿದ್ದಿದ್ದಾರೆ. ತನಗೆ ಅಪಾಯಕಾರಿಯಾದ ಒಂದು ನರಪಿಳ್ಳೆಯೂ ಇಲ್ಲ. ಅಲ್ಲದೆ ರಕ್ಷಣೆಗೆ ತನ್ನ ಕೈಲಿ ರಿವಾಲ್ವರ್ ಇದೆ" ಎಂದುಕೊಂಡಳು ಮೈಯೆಲ್ಲಾ ಕಣ್ಣು ಮಾಡಿ ಕೊಂಡು ಭವನದ ಕಡೆಗೆ ಹೊರಟಳು. ಕಲ್ಲು ಮುಳ್ಳುಗಳಿಂದ ತುಂಬಿದ ಕಾಲುದಾರಿಯಲ್ಲಿ ನಡೆದು ಭವನದ ಮುಂದಿನ ತೋಟದ ಬಳಿ ಬಂದು ನಿಂತಳು. ತೋಟದ ಒಳಗೆ ಹೋಗುವ ದಾರಿ, ಬಳ್ಳಿಗಳನ್ನು ಹಬ್ಬಿಸಿದ ಕಮಾನಿನ ಕೆಳಗೆ ಹಾದುಹೋಗಿತ್ತು. ತೋಟದ ಆ ಹೆಬ್ಬಾಗಿಲಿನ ಬಳಿ ಬಂದಕೂಡಲೇ ಎದುರಿಗೆ ತಾನು ನೋಡಿದ ದೃಶ್ಯದಿಂದ ಅವಳು ಸ್ತಬ್ಧಳಾಗಿ ನಿಂತಳು—

ಕಮಾನಿನಿಂದ ಒಂದು ಹಗ್ಗ ಜೋತುಬಿದ್ದಿತ್ತು. ಅದರ ಕೊನೆಯಲ್ಲಿ ಒಂದು ಕುಣಿಕೆ. ಅದರ ನೇರಕ್ಕೆ ಸರಿಯಾಗಿ ನೆಲದಮೇಲೆ ಒಂದು ಸ್ಟೂಲು. ನೇಣುಹಾಕಿಕೊಳ್ಳಲು ಮಾಡಿಕೊಳ್ಳುವ ಸಾಧನಗಳು. ಅವಳ ಜಂಘಾಬಲ ಉಡುಗಿ ಹೋಯ್ತು. ತಲೆ ತಿರುಗಿ ಬಂತು. ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಹಾಗೇ ನಿಂತಳು.

ಅವಳ ಯೋಚನೆಗಳೆಲ್ಲ ತಲೆಕೆಳಗಾದವು. ದ್ವೀಪದಲ್ಲಿ ತನ್ನ ಹೊರತು ಬೇರೆ ಯಾರೂ ಇಲ್ಲವೆಂಬ ಧೈರ್ಯದಿಂದ ಇದ್ದ ಅವಳಿಗೆ ಆ ಭಯಂಕರ ದೃಶ್ಯವನ್ನು ನೋಡಿ ಎಲ್ಲಾ ಹೊಳೆಯಿತು. ಕೊಲೆಗಾರ ಇನ್ನೂ ಬದುಕಿದ್ದಾನೆ. ತನಗಾಗಿ ಅವನು ಕಾಯುತ್ತಿದ್ದಾನೆ. ತನಗಾಗಿಯೇ ಈ ಕುಣಿಕೆ ಸಿದ್ಧಪಡಿಸಲಾಗಿದೆ. ಹಾಗಾದರೆ ಆ ಕೊಲೆಗಾರನಾರು? ತಮ್ಮ ಒಂಭತ್ತು ಜನರಿಂದ ಅನ್ಯನಾದವನಿರಬೇಕು. ಆದರೆ ಆ ಸಮಸ್ಯೆಗೆ ಉತ್ತರ ಅವಳಿಗೆ ಬೇಕಾಗಿರಲಿಲ್ಲ. ಕೊಲೆಗಾರ ಯಾರೇ ಆಗಿರಲಿ, ಅವನ

೧೨೦

ಕೈಯ್ಯಾರೆ ಬಲಿಯಾಗುವುದಕ್ಕಿಂತ ತಾನೇ ಆತ್ಮಹತ್ಯೆ ಮಾಡಿಕೊಳ್ಳುವುದು ವಾಸಿ ಎನಿಸಿತು. ಮತ್ತೆ ಅವಳಿಗೆ ಕೊನೆಯಬಾರಿ ಶಿವಕುಮಾರನ ದಾರುಣಚಿತ್ರ ಕಣ್ಣಿಗೆ ಕಟ್ಟಿತು. ಅವಳಿಗೆ ಬಹಳ ವ್ಯಥೆಯಾಯ್ತು. ತಾನು ಮಾಡಿದ ಪಾಪಕ್ಕೆ ಸರಿಯಾದ ಶಿಕ್ಷೆ ಅನುಭವಿಸಬೇಕಾಯ್ತು ಎಂದು ಕೊಂಡಳು. ಅವಳು ಹೆಚ್ಚು ಕಾಲ ಯೋಚಿಸಲಿಲ್ಲ. ನೇರವಾಗಿ ಹೋಗಿ ಸ್ಟೂಲಿನ ಮೇಲೆ ನಿಂತು, ಕುಣಿಕೆಯನ್ನು ಕುತ್ತಿಗೆಗೆ ಹಾಕಿಕೊಂಡು ಸ್ಟೂಲನ್ನು ಕಾಲಿನಿಂದ ನೂಕಿದಳು.

೧೫

ಪೋಲೀಸ್ ಸೂಪರಿಂಟೆಂಡೆಂಟ್ ಬಲರಾಂ ಅರಚಿದರು, "ಛೆ! ಎಂದಿಗೂ ಸಾಧ್ಯವಿಲ್ಲ....ನಂಬಲಸಾಧ್ಯ"

ಇನ್ಸ್‌ಪೆಕ್ಟರ್ ರಾಮಲಾಲ್ "ಆದರೆ ನಂಬಬೇಕಾಗಿದೆ...." ಎಂದ.

"ಒಂಭತ್ತು ಜನರಿದ್ದ ದ್ವೀಪದಲ್ಲಿ ಎಲ್ಲರೂ ಸತ್ತು ಬಿದ್ದಿದ್ದಾರೆ. . . ಬೇರೆಯಾರೂ ಅಲ್ಲಿಲ್ಲ, ಎಂದರೆ ಹುಚ್ಚರೂ ನಂಬುವುದಿಲ್ಲ.....ಹಾಗಾದರೆ ಅವರೆಲ್ಲರನ್ನೂ ಕೊಂದವರು ಯಾರು ? ಅವನೇನಾದ ? .. "

"ಅದೇ ನಮ್ಮ ಈಗಿನ ಸಮಸ್ಯೆಯಾಗಿದೆ. ಅಲ್ಲಿ ದೊರೆತ ಪ್ರತಿಯೊಂದು ಸಾಧನವನ್ನೂ ಪರಿಶೀಲಿಸಿದ್ದಾಯಿತು. ಆದರೆ ಬಗೆಹರಿಯಲಿಲ್ಲ. ದೇಹಗಳನ್ನು ಪರೀಕ್ಷೆ ಮಾಡಿದ ಡಾಕ್ಟರ್, ಅವರುಗಳ ಮರಣದ ಕಾಲವನ್ನೂ ನಿರ್ಧರಿಸುವುದು ಕಷ್ಟಕರವಾಗಿದೆ, ಎಂದರು"

"ಸರಿ....ಆದರೆ ದ್ವೀಪದಲ್ಲಿ ಅವರುಗಳು ಸತ್ತುಬಿದ್ದಿರುವ ಸಮಾಚಾರವಾದರೂ ಹೇಗೆ ತಿಳಿಯಿತು ?"

"ನೀಲದ್ವೀಪದಲ್ಲಿ ದೀಪಸ್ತಂಭವನ್ನು ಕಟ್ಟುವ ಉದ್ದೇಶ್ಯದಿಂದ ಸರ್ವೆ ನಡೆಸಲು ಹೋದಾಗ ತಿಳಿದುಬಂತು."

"ಹೇಗಾದರೂ ಮಾಡಿ ಈ ಕೊಲೆಗಳ ರಹಸ್ಯವನ್ನು ಪತ್ತೆಹಚ್ಚಲೇ ಬೇಕು.....ಇಲಾಖೆಯ ಅತ್ಯುನ್ನತ ಪತ್ತೇದಾರರನ್ನು ಈ ಕೆಲಸಕ್ಕಾಗಿ

ನೇಮಿಸಲಿ. ಇಂದೇ ಆರಂಭವಾಗಲಿ ತನಿಖೆ" ಎಂದು, ಮೇಲೆದ್ದರು ಪ್ರೊ || ಸೂ || ಬಲರಾಂ.

ಒಂದು ತಿಂಗಳ ಕಾಲ ಏಕಪ್ರಕಾರವಾಗಿ ತನಿಖೆಯಾಯ್ತು. ಆದರೆ ಏನೂ ಪ್ರಯೋಜನವಾಗಲಿಲ್ಲ. ಕೊನೆಗೂ ನೀಲದ್ವೀಪದ ರಹಸ್ಯ, ರಹಸ್ಯವಾಗಿಯೇ ಉಳಿಯಿತು. ಬಲರಾಂ ನಿರಾಶರಾದರು. "ಹಾಗಾದರೆ ಅವರೆಲ್ಲರೂ ಹೇಗೆ ಸತ್ತರು ? ಕೊಂದವರು ಯಾರು.... ?" ಎಂಬ ಯೋಚನೆ ಯಾವಾಗಲೂ ಅವರನ್ನು ಪೀಡಿಸತೊಡಗಿತು.

* * * *

## ಉಪಸಂಹಾರ

[ಬೆಸ್ತನೊಬ್ಬನು ನೀಲದ್ವೀಪದ ತೀರದಲ್ಲಿ ತನಗೆ ಸಿಕ್ಕಿದ ಗಾಜಿನ ಸೀಸೆಯಲ್ಲಿನ ಪತ್ರವನ್ನು ಪೋಲೀಸ್ ಇಲಾಖೆಗೆ ತಲುಪಿಸಿದ—ಆ ಪತ್ರದ ಪಡಿಯಚ್ಚು: ]

"ನೀಲದ್ವೀಪದ ರಹಸ್ಯ !" ಹೌದು. ಅದೊಂದು ರಹಸ್ಯ. ಅದು ಕೊನೆಯವರೆಗೂ ರಹಸ್ಯವಾಗಿಯೇ ಉಳಿಯಬೇಕೆಂದು, ಆ ರಹಸ್ಯವನ್ನು ಸೃಷ್ಟಿಸಿದ ನನ್ನ ಮೊದಲ ಬಯಕೆಯಾಗಿತ್ತು. ಆದರೆ ಒಂದು ರಹಸ್ಯಪ್ರಕರಣದ ಗುಟ್ಟು ಕೊನೆಗೆ ಎಂದಾದರೂ ಬಯಲಾದರೆ, ರಹಸ್ಯದ ಸ್ವಾರಸ್ಯ ಮತ್ತೂ ಹೆಚ್ಚುತ್ತದೆ ಎಂದೆನಿಸಿ ಈ ಪತ್ರವನ್ನು ಬರೆಯುತ್ತಿದ್ದೇನೆ. ಪತ್ರವನ್ನು ಗಾಜಿನ ಸೀಸೆಯೊಂದರಲ್ಲಿ ಮೊಹರು ಮಾಡಿ ಸಮುದ್ರದಲ್ಲಿ ಎಸೆಯುವುದೇ ನನ್ನ ಕೆಲಸ. ಅದು ಯಾರ ಕೈಗೂ ಸಿಗದೆ ಹೋದರೂ ಹೋಗಬಹುದು. ಅಥವಾ ಸಿಕ್ಕಿ ಬಹಿರಂಗವಾದರೂ ಆಗಬಹುದು.

"ಮೊದಲಿಂದಲೂ ನನ್ನಲ್ಲಿ ಎರಡು ವಿರುದ್ಧ ಪ್ರವೃತ್ತಿಗಳು ಬೆಳೆದು ಬಂದವು. ವಂಚನೆ, ಅಕೃತ್ಯ, ದರೋಡೆ, ಕೊಲೆ ಇವುಗಳ ವಿಷಯದಲ್ಲಿ ಒಂದು ರೀತಿಯ ಆಸಕ್ತಿ. ವೃತ್ತ ಪತ್ರಿಕೆಗಳಲ್ಲಿ ನಾನು ಓದಲು ಆರಿಸಿಕೊಳ್ಳುತ್ತಿದ್ದ ವಿಷಯ ಇವಕ್ಕೆ ಸಂಬಂಧಪಟ್ಟ ಸುದ್ದಿಗಳೇ. ಕಥೆ, ಕಾದಂಬರಿಗಳಲ್ಲೂ ನಾನು ಇಂತಹ ವಸ್ತುಗಳನ್ನೇ ಹೆಚ್ಚಾಗಿ ಮೆಚ್ಚುತ್ತಿದ್ದೆ. ಇದಕ್ಕೆ ವಿರುದ್ಧವಾಗಿ ನನ್ನ

ಅಂತರ್ಯ ಯಾವಾಗಲೂ ನ್ಯಾಯ, ಸತ್ಯ ಮತ್ತು ಧರ್ಮದ ಕಡೆಗೆ ವಾಲು ತ್ತಿತ್ತು.

"ನನ್ನ ಇಡೀ ಜೀವನದಲ್ಲಿ ಯಾರಿಗೂ ನಾನು ಅನ್ಯಾಯ ಮಾಡಿದವನಲ್ಲ. ನನ್ನ ಸಂಸ್ಕಾರಕ್ಕೆ ಸಮಂಜಸವಾದ ಉದ್ಯೋಗ ನನಗೆ ದೊರೆಶಿದ್ದು ನನ್ನ ಪುಣ್ಯ. "ನ್ಯಾಯ ಪಕ್ಷಪಾತಿ" ಎಂದು ಪ್ರಸಿದ್ಧನಾದೆ. ನಿರಪರಾಧಿಗಳಿಗೆ ಎಂದೂ ಶಿಕ್ಷೆ ವಿಧಿಸಿದವನು ನಾನಲ್ಲ. ರಘುವೀರನ ಕೇಸಿನಲ್ಲಿ ನನ್ನ ತೀರ್ಪನ್ನು ಅನೇಕ ಜನರು ಖಂಡಿಸಿದರು. ಆದರೆ ಅದಕ್ಕೆ ಕಾರಣ, ರಘುವೀರನ ಮುಗ್ಧ ಮುಖವನ್ನು ನೋಡಿ, ಅವನ ಪರ ವಾದಿಸಿದ ವಕೀಲನ ವಾಗ್ಝರಿಯನ್ನು ಕೇಳಿ ಜನ ಮರುಳಾಗಿದ್ದರು. ಅವನು ಅಪರಾಧಿ ಎಂಬುದು ಸಾಕ್ಷ್ಯಗಳಿಂದ ಸಿದ್ಧವಾಯ್ತು.

"ನ್ಯಾಯಾಧೀಶ ಪದವಿಯಿಂದ ನಿವೃತ್ತನಾದಮೇಲೆ ಮತ್ತೆ ನನ್ನಲ್ಲಿ ವಿರುದ್ಧ ಪ್ರವೃತ್ತಿಗಳ ಹೋರಾಟ ಆರಂಭವಾಯ್ತು. ನನ್ನ ನ್ಯಾಯ ನಿಷ್ಠೆ, ನನ್ನಲ್ಲಿದ್ದ ಅಕೃತ್ಯದಲ್ಲಿನ ಆಸಕ್ತಿಯನ್ನು ಕೆರಳಿಸಿತು, ಎಂದರೆ ಹಾಸ್ಯಾಸ್ಪದವಾಗಿ ಕಾಣಬಹುದು. ಆದರೆ ಅದು ನಡೆದಿದ್ದು ಹೀಗೆ ? ನಮ್ಮ ಸಮಾಜದಲ್ಲಿ ದಿನ ದಿನವೂ ಮೋಸ, ದರೋಡೆ, ಕೊಲೆಗಳ ಅನ್ಯಾಯ ಪರಂಪರೆ ನಡೆಯುತ್ತಲೇ ಇದೆ. ಆದರೆ ಇವುಗಳೆಲ್ಲ ಸರ್ಕಾರದ ಗಮನಕ್ಕೆ ಬರುವುದಿಲ್ಲ. ಕರ್ತವ್ಯ, ಸ್ನೇಹ, ಸಾಹಸ, ಆಕಸ್ಮಿಕ, ಗೌರವ ಪ್ರತಿಷ್ಠೆಗಳ ಹೆಸರಿನಲ್ಲಿ ಅಸಂಖ್ಯಾತ ಅನ್ಯಾಯಗಳು ನಡೆಯುತ್ತಿವೆ. ಶಿಕ್ಷೆಗೆ ಅರ್ಹರಾದವರಲ್ಲಿ ಅನೇಕರು ಸಮಾಜದಲ್ಲಿ ಗಣ್ಯಸ್ಥಾನಗಳನ್ನು ಗಳಿಸಿಕೊಂಡು ಮೆರೆಯುತ್ತಿದ್ದಾರೆ. ಅಂತಹವರಲ್ಲಿ ನಾಲ್ಕಾರು ಜನರನ್ನಾದರೂ ಶಿಕ್ಷಿಸಬೇಕೆಂಬ ಹಂಬಲ ನನಗುಂಟಾಯ್ತು. ವಂಚಕರಿಗೆ ವಂಚನೆಯೇ ಉಪಾಯ, ವೇಷಧಾರಿಗಳಿಗೆ ವೇಷವೇ ದಿವ್ಯೌಷಧ ಎಂಬುದು ನನ್ನ ನಂಬಿಕೆ. ಈ ಹಂಬಲದ ಜೊತೆಗೆ ಅತ್ಯಂತ ಗೂಢವಾದ ರಹಸ್ಯವೊಂದನ್ನು ಸೃಷ್ಟಿಸಬೇಕೆಂಬ ಹಿರಿದಾಸೆ ನನಗಿತ್ತು. ಇವುಗಳ ಫಲವೇ 'ಸೀಲದ್ವೀಪದ ರಹಸ್ಯ'

"ನನ್ನ ಆಸೆಯ ಪೂರೈಕೆಗೆ ಎಂಟು ಜನ ತುಂಟರನ್ನು ಆರಿಸಿಕೊಂಡೆ. ನಾಲ್ಕಾರು ವರ್ಷಗಳ ಪ್ರಯತ್ನದಿಂದ ಅವರ ಚರಿತ್ರೆ, ಅಕೃತ್ಯಗಳು, ಸಮಾಜ

ದಲ್ಲಿನ ಸ್ಥಾನಮಾನಗಳನ್ನು, ಮತ್ತು ಸ್ನೇಹ ಬಾಂಧವ್ಯಗಳ ಬಗ್ಗೆ ವಿಷಯಗಳನ್ನು ಸಂಗ್ರಹಿಸಿದೆ. ಅವರೆಲ್ಲರೂ ಸಮಾಜದ್ರೋಹಿಗಳಾದ ಘಾತುಕರು. ಮುಂದೆಯೂ ಅವರಿಂದ ಸಮಾಜಕ್ಕೆ ಕೇಡು ತಪ್ಪಿದ್ದಲ್ಲ. ಅವರೆಲ್ಲರೂ ಮರಣದಂಡನೆಗೆ ಅರ್ಹರಾದವರು. ಒಂದು ದೃಷ್ಟಿಯಿಂದ ಅವರಿಗೆ ನಾನು ವಿಧಿಸಿದ ಶಿಕ್ಷೆಗಳು ಅನ್ಯಾಯವೇ ಆದರೂ ಇನ್ನೊಂದು ದೃಷ್ಟಿಯಿಂದ ಅವು ಕ್ಷಮ್ಯವಾಗುತ್ತವೆ.

"ನೀಲದ್ವೀಪವನ್ನು ಮೂರನೆಯವನೊಬ್ಬನ ಮೂಲಕ 'ಮಾಧವ' ಎಂಬ ಹೆಸರಲ್ಲಿ ಕೊಂಡುಕೊಂಡೆ. ಪತ್ರಿಕೆಗಳಲ್ಲಿ ನಾನಾ ರೀತಿಯ ಪ್ರಚಾರಗಳನ್ನು ಮಾಡಿಸಿದೆ. ಎಲ್ಲರಿಗೂ ಬೇರೆಯವರ ಕೈಯಲ್ಲಿ ಆಹ್ವಾನ ಪತ್ರಗಳನ್ನು ಬರೆಸಿದೆ. ರಾಮದಾಸ್ ಮತ್ತು ದೋಣಿಯ ಶ್ಯಾಮಲಾಲ್‌ರನ್ನು ಬೇರೆ ಬೇರೆ ಕಡೆಯಿಂದ ಕರೆಸಿಕೊಂಡು ಅವರಿಂದ ಹಲವಾರು ರೀತಿಯಲ್ಲಿ ಸಹಾಯ ಪಡೆದೆ. ಅವರ ಪರಿಚಯ ಈ ಕಡೆಯವರಿಗೆ ಯಾರಿಗೂ ಇರಲಿಲ್ಲ. ಗ್ರಾಮೋಫೋನ್ ರಿಕಾರ್ಡನ್ನು ಯಾವುದೋ ಪ್ರೈವೇಟ್ ಕಂಪೆನಿಯೊಂದರಲ್ಲಿ ಮಾಡಿಸಿದೆ. ಅದರ ಮೇಲೆ ಕಂಪೆನಿಯ ಹೆಸರನ್ನೂ ಸೂಚಿಸಿರಲಿಲ್ಲ. ಭವನದಲ್ಲಿ ಎಲ್ಲಾ ಸಿದ್ಧತೆಗಳನ್ನೂ ಮೊದಲೇ ಮಾಡಿಟ್ಟುಕೊಂಡಿದ್ದೆ. ಎಲ್ಲಾ ಏರ್ಪಾಡುಗಳನ್ನು ನಗರದಲ್ಲಿ ಯಾರ ಪರಿಚಯವೂ ಇಲ್ಲದ ಬೇರೆಯವರಿಂದ ಮಾಡಿಸಿದ್ದರಿಂದ ನನ್ನ ಮೇಲೆ ಯಾರಿಗೂ ಅನುಮಾನವಾಗಲಿಲ್ಲ. ಕೊನೆಗೆ ನಾನೂ ಆಹ್ವಾನಿತರಲ್ಲೊಬ್ಬನಂತೆ ವೇಷ ಧರಿಸಿ ನೀಲದ್ವೀಪಕ್ಕೆ ಬಂದೆ.

"ಇನ್ನು ಕ್ರಮವಾಗಿ ಎಂಟು ಜನ ತುಂಟರನ್ನು ಶಿಕ್ಷಿಸಿದ ರೀತಿ— ಕಿರ್ಪಚಂದ್ ವಿಪರೀತ ಕುಡಿಯುತ್ತಿದ್ದ. ಗ್ರಾಮೋಫೋನ್ ರೆಕಾರ್ಡ್ ಪ್ರಸಂಗವಾದ ಬಳಿಕ ಎಲ್ಲರೂ ದಿಗ್ಭ್ರಾಂತರಾದರು. ಭಯದಿಂದ ನಡಗುತ್ತಿದ್ದರು. ಸಮಯ ಸಾಧಿಸಿ ನಾನು ಉದ್ದೇಶಪೂರ್ವಕವಾಗಿ ತೆಗೆದುಕೊಂಡು ಬಂದಿದ್ದ ಸಯನ್ಯೆಡನ್ನು ಅವನ ಲೋಟಕ್ಕೆ ಹಾಕಿದೆ.

"ಸರೋಜಮ್ಮ ಭಯದಿಂದ ವಿಹ್ವಲಳಾಗಿದ್ದಾಗ ಅವಳ ಉಪಚಾರಕ್ಕಾಗಿ ಹಾಲನ್ನು ತರಿಸಲಾಯ್ತು. ಅದನ್ನು ಆನಂದನ ಕೈಗೆ ಕೊಡುವ

ಸಮಯದಲ್ಲಿ ಕ್ಲೋರಲ್ ಹೈಡ್ರೇಟ್ ಅನ್ನು ಹಾಲಿನಲ್ಲಿ ಸೇರಿಸಿದೆ. ಆಗಿನ್ನೂ ಯಾರಿಗೂ, ಯಾರಮೇಲೂ ಸಂದೇಹಪ್ರಾರಂಭವಾಗಿರಲಿಲ್ಲ. ಕಿರ್ಪಚಂದನು ಇನ್ನೂ ಸತ್ತಿರಲಿಲ್ಲ. ಅವಳಿಗೆ ವಿಶ್ರಾಂತಿ ಬೇಕು ಎಂಬ ನೆಪದಲ್ಲಿ ಶಿವರಾಮು ನೊಡನೆ ಸರೋಜಮ್ಮನನ್ನು ನಿದ್ರಿಸಲು ಕಳುಹಿಸಿದೆ. ಕ್ಲೋರಲ್ ಹೈಡ್ರೇಟನ್ನು ಮಿತಿಮೀರಿ ಸೇವಿಸಿದ್ದರಿಂದ ಸರೋಜಮ್ಮನ ಮರಣ ನಿಧಾನವಾಗಿ ಸಮೀಪಿಸಿತು. ಸಯನ್ಯೆಡಷ್ಟು ಬೇಗ ಕೆಲಸ ಮಾಡುವ ವಿಷವಲ್ಲ ಅದು.

"ಗೋವಿಂದನಾಯರ ಕೊಲೆ ಸುಲಭವಾಗಿ ನಡೆಯಿತು. ಆನಂದ, ಅಜಯ ಮತ್ತು ಶಿವರಾಮರು ದ್ವೀಪವನ್ನು ಅಜ್ಞಾತ ಕೊಲೆಗಾರನಿಗಾಗಿ ಪರೀಕ್ಷಿಸುತ್ತಿದ್ದಾಗ, ಸಮಯ ಸಾಧಿಸಿ ಅವರ ಬಳಿಗೆ ಹಿಂದಿನಿಂದ ಹೋಗಿ, ನೀರಿನ ಕಡೆಗೆ ತಿರುಗಿ ಕುಳಿತಿದ್ದ ಅವರನ್ನು ಒಂದೇ ಏಟಿಗೆ ಮುಗಿಸಿ, ಆಯುಧವನ್ನು ನೀರಿಗೆ ಎಸೆದು ಬಂದೆ.

"ಶಿವರಾಮು ಬೆಳಗಿನ ಜಾವ ಐದು ಗಂಟೆಗೇ ಏಳುತ್ತಿದ್ದ. ಆರು ಗಂಟೆಗೆಮುಂಚೆ ಉಳಿದವರಾರೂ ಏಳುತ್ತಿರಲಿಲ್ಲ. ಹಿಂದಿನ ಔಟ್‌ಹೌಸಿನಲ್ಲಿ ಕಟ್ಟಿಗೆ ಸೀಳುತ್ತಿದ್ದ, ಶಿವರಾಮು. ಪಕ್ಕದಲ್ಲಿದ್ದ ಕೊಡಲಿಯೇ ನನ್ನಆಯುಧ ವಾಯ್ತು.

"ಶಿವರಾಮನನ್ನು ಹುಡುಕುವ ಗಲಾಟೆಯಲ್ಲಿ ಉಳಿದವರು ತೊಡಗಿ ದ್ದಾಗ ಆನಂದ, ಅಜಯರ ಕೋಣೆಗಳನ್ನು ಪ್ರವೇಶಿಸಿ [ಎಲ್ಲರ ಕೋಣೆಗಳ ಕೀಲಿಗಳೂ ನನ್ನಲ್ಲಿದ್ದವು] ಕ್ರಮವಾಗಿ ಅವರ ಹೈಪೋಡರ್ಮಿಕ್‌ಸಿರಿಂಜ್ ಮತ್ತು ರಿವಾಲ್ವರನ್ನು ಅಪಹರಿಸಿದೆ.

"ಅದೇ ದಿನ ಬೆಳಗ್ಗೆ ಉಪಹಾರ ಸಮಯದಲ್ಲಿ ನನ್ನ ಪಕ್ಕದಲ್ಲಿದ್ದ ಸುಧಾದೇವಿಯ ಗ್ಲಾಸಿನಲ್ಲಿ ಮತ್ತು ಬರುವ ಪುಡಿ ಸೇರಿಸಿದೆ. ಆಮೇಲೆ ಏಕಾಂಗಿಯಾಗಿ ಅವಳು ಡೈನಿಂಗ್‌ಹಾಲ್‌ನಲ್ಲಿ ಮತ್ತೇರಿ ಕುಳಿತಿದ್ದಾಗ, ಸಯನೈಡ್‌ದ್ರವವನ್ನು ಆನಂದನ ಹೈಪೋಡರ್ಮಿಕ್ ಸಿರಿಂಜಿನ ಸಹಾಯ ಧಿಂದ ಅವಳ ರಕ್ತಕ್ಕೆ ಸೇರಿಸಿದೆ,

"ಇದುವರೆವಿಗೂ ಐದು ಜನರು ನನ್ನ ಶಿಕ್ಷೆಗೆ ಬಲಿಯಾಗಿದ್ದರು. ಆ ಹೊತ್ತಿಗಾಗಲೇ ಪರಸ್ಪರ ಸಂದೇಹ ಆರಂಭವಾಗಿತ್ತು. ಕೊಲೆಗಾರ ನಮ್ಮಲ್ಲೇ ಒಬ್ಬನೆಂದೂ ತೀರ್ಮಾನವಾಗಿತ್ತು. ಜನ ಕಡಮೆಯಾದಂತೆ ನನ್ನ ಕೆಲಸವೂ ಕಷ್ಟವಾಯ್ತು. ಹೀಗೆ ಆಗುವುದೆಂದು ನನಗೆ ಮೊದಲೇ ಗೊತ್ತಿತ್ತು. ಅದಕ್ಕಾಗಿ ಒಂದು ಉಪಾಯ ಯೋಚಿಸಿದ್ದೆ. ನನ್ನ ಕೆಲಸ ಸಾಗಿಸಬೇಕಾದರೆ, ಯಾರನ್ನಾದರೂ ಒಳಹಾಕಿಕೊಳ್ಳಬೇಕಾಗಿತ್ತು. ಆನಂದನೇ ಈ ಕೆಲಸಕ್ಕೆ ಸರಿ ಎಂದು ನಿರ್ಧರಿಸಿದೆ. ಅವನು ಸಂಶಯ ಪ್ರಕೃತಿಯವನಲ್ಲ. ಕೊಲೆಗಾರ ನಮ್ಮಲ್ಲೇ ಒಬ್ಬನೆಂದು ತೀರ್ಮಾನಿಸ ಲಾಗಿತ್ತು. ಆನಂದನ ಅನುಮಾನ ಆಶಾ ಮತ್ತು ಅಜಯರ ಮೇಲೆ ತಿರುಗುವಂತೆ ಮಾಡುತ್ತಿದ್ದೆ. ಸಮವಯಸ್ಕರಾದ ಅಜಯ, ಆಶಾ ಸಹಜ ವಾಗಿ ಹೆಚ್ಚಾಗಿ ಕಲೆತು ಮಾತಾಡುತ್ತಿದ್ದರು. ಅವರಿಬ್ಬರ ನಡುವೆ ಇದ್ದ ಸಲುಗೆಯನ್ನು ಆನಂದನಿಗೆ ಆಗಾಗ್ಗೆ ತೋರಿಸಿ ಅವನನ್ನು ನಂಬಿಸುತ್ತಿದ್ದೆ. ಅವರೇ ಮಾಧವ್ ಮತ್ತು ಲೀಲಾವತಿ ಎಂಬ ಹೆಸರಿನಲ್ಲಿ ಉಳಿದವರನ್ನು ತಮ್ಮ ಬಲೆಗೆ ಹಾಕಿಕೊಂಡಿರಬಹುದು ಎಂದೂ ಸೂಚಿಸಿದೆ. ಶ್ಯಾಮಲಾ ಲನೂ ಅವರಿಗೆ ಸಹಾಯಕನಿರಬೇಕೆಂದು ಆನಂದ ಸಂದೇಹಪಟ್ಟ. ನಾನೂ ಅದಕ್ಕೆ ನನ್ನ ಸಮ್ಮತಿ ಸೂಚಿಸಿದೆ. ಕೊಲೆಗಾರನನ್ನು ಹಿಡಿಯಲು ಇಬ್ಬರೂ ಉಪಾಯವನ್ನು ಯೋಚಿಸಿದೆವು. ನಮ್ಮ ಉಪಾಯವಿಷ್ಟು—ನಾನು ಕೊಲೆಗಾರನ ಮುಂದಿನ ಬಲಿಯಂತೆ ನಟಿಸುವುದು, ತಾನೇ ಡಾಕ್ಟರ್ ಆದ್ದರಿಂದ ಅವನು ನನ್ನ ನಟನೆಯ ಮರಣದ ಬಗ್ಗೆ ಸಮರ್ಥನೆ ಕೊಡುವುದು. ಅಜ್ಞಾತವಾಗಿ ನಾನು, ಅಜಯ, ಮತ್ತು ಆಶಾದೇವಿಯರ ಚಲನವಲನಗಳಮೇಲೆ ಕಣ್ಣಿಟ್ಟಿರುವುದು. ಸಮಯಸಾಧಿಸಿ ಹಿಡಿಯುವುದು. ಆನಂದ ನನ್ನಂತಹ ಪ್ರಸಿದ್ಧ ನ್ಯಾಯಾಧೀಶನಲ್ಲಿ ಯಾವ ಕೃತ್ರಿಮವನ್ನೂ ಕಾಣಲು ಕಾರಣವಿರಲಿಲ್ಲ. ಅವನು ನನ್ನನ್ನು ಪೂರ್ಣವಾಗಿ ನಂಬಿದ.

" ಆ ಸಾಯಂಕಾಲ ಆಶಾದೇವಿ ತನ್ನ ಕೋಣೆಯಲ್ಲಿ ಭಯದಿಂದ ಅರಚಿದಳು. ಬಳ್ಳಿಯ ಏರ್ಪಾಡನ್ನೂ ನಾನೇ ಮಾಡಿದ್ದೆ. ಅಜಯ ಆನಂ

ದರು ಆಶಾಳ ನೆರವಿಗೆ ಮೇಲೆ ಓಡಿದಾಗ ನನ್ನ ನಟನೆ ಆರಂಭವಾಯಿತು. ಗುಂಡಿನೇಟಿಗೆಬಲಿಯಾದವನಂತೆ ವೇಷಧರಿಸಿದೆ. ಅಜಯ್,ಆಶಾ,ಆನಂದನ ಮಾತನ್ನು ಪೂರ್ಣವಾಗಿ ನಂಬಿದರು. ಸಂದೇಹ ಬರಲು ಕಾರಣವಿರಲಿಲ್ಲ. ಆನಂದನಿಂದ ಆಗ ಬೇಕಾದ ಕೆಲಸವಾಯಿತು. ಇನ್ನು ಅವನನ್ನು ಉಳಿಸಿದರೆ ನನ್ನ ರಹಸ್ಯ ಬಯಲಾಗುವ ಸಂದರ್ಭ ಒದಗಬಹುದಾಗಿತ್ತು; ಅದೇ ರಾತ್ರಿ ಅಜಯನ ರಿವಾಲ್ವರನ್ನು ಮತ್ತೆ ಅವನ ಡ್ರಾಯರಿಗೆ ಸೇರಿಸಿದೆ. ಪಿರಿಂಜನ್ನು ಹಿಂದೆಯೇ ಒಡೆದುಹಾಕಿಬಿಟ್ಟಿದ್ದೆ. ಆ ರಾತ್ರಿ ಒಂದೂವರೆ ಘಂಟೆಯ ಹೊತ್ತಿನಲ್ಲಿ ನಮ್ಮ ಪರೀಕ್ಷೆಯ ವಿಷಯ ಆಲೋಚಿಸುವ ನೆಪದಿಂದ, ಆನಂದನನ್ನು ಗುಡ್ಡದ ಶಿಖರದ ಬಳಿ ಕರೆದುಕೊಂಡು ಹೋಗಿ,ಸಮಯ ನೋಡಿ ಅವನನ್ನು ಕಡಿದಾದ ಪ್ರಪಾತಕ್ಕೆ ತಳ್ಳಿ ಕೂಡಲೆ ನನ್ನ ಕೋಣೆಯನ್ನು ಸೇರಿಕೊಂಡೆ.

"ಮುಂದೆ ಕೈಗೊಳ್ಳಬಹುದಾದ ಉಪಾಯವನ್ನು ಯೋಚಿಸುತ್ತಿದ್ದೆ. ಆ ಹೊತ್ತಿಗೆ ಸರಿಯಾಗಿ ಆಶಾ ನನ್ನ ಅರ್ಧ ಜವಾಬ್ದಾರಿಯನ್ನು, ತನಗೆ ಅರಿವಿಲ್ಲದಂತೆ ಕಡಮೆಮಾಡಿದಳು. ಅವಳಿಗೆ ಅಜಯನ ಮೇಲೇ ಸಂದೇಹ ಬಂದಿರಬೇಕು. ಅದಕ್ಕೆ ಕಾರಣ, ಆನಂದನ ಮರಣ ಮತ್ತು ಅವನ ಬಳಿಯಿದ್ದ ರಿವಾಲ್ವರ್. ಆಶಾ, ಅಜಯನ ಮೇಲೆ ಗುಂಡಿನ ಮಳೆಯನ್ನು ಕರೆದಾದಮೇಲೆ, ಉದ್ಯಾನವನದ ಹೊರಬಾಗಿಲಿನಲ್ಲಿ ಹಗ್ಗದ ಕುಣಿಕೆಯ ದೃಶ್ಯವನ್ನು ಏರ್ಪಡಿಸಿ ಮತ್ತೆ ಭವನ ಸೇರಿದೆ. ತನ್ನ ಆಗಿನ ಪರಿಸ್ಥಿತಿಯಲ್ಲಿ ಆಶಾಗೆ ಬೇರೆ ಯಾವ ಉಪಾಯವೂ ಹೊಳೆಯುವಂತಿರಲಿಲ್ಲ. ಅದು ಅವಳ ಮನಸ್ಸಿನಮೇಲೆ ತೀವ್ರ ಪರಿಣಾಮವುಂಟುಮಾಡಿರಬೇಕು. ತಾನೇ ನೇಣು ಹಾಕಿಕೊಂಡು ನನ್ನ ಕೆಲಸವನ್ನು ಪೂರ್ಣಗೊಳಿಸಿದಳು.

ಇನ್ನು ಬರೆಯುವುದು ಹೆಚ್ಚೇನೂ ಉಳಿದಿಲ್ಲ. ನೀಲದ್ವೀಪದ ಪ್ರಕರಣವನ್ನು ರಹಸ್ಯವಾಗಿಡಲು ನನ್ನ ಬುದ್ಧಿಗೆ ಹೊಳೆದಷ್ಟು ಮಾಡಿದ್ದೇನೆ. ತನಿಖೆ ನಡೆಯುವ ಹೊತ್ತಿಗೆ ಇಲ್ಲಿ ನಡೆದ ಪ್ರತಿಯೊಂದು ಕೊಲೆಯ ನಿಶ್ಚಿತ ಕಾಲವನ್ನು ನಿರ್ಧರಿಸುವುದೂ ಅಸಾಧ್ಯ. ಕ್ರಮವಾಗಿ

ಯಾರಾರು ಕೊಲೆಯಾದರು ಎಂದು ಊಹಿಸುವುದೂ ಕಷ್ಟ. ನನ್ನ ಕೆಲಸ ವಾದಂತಾಯಿತು. ಆ ಕೃತ್ಯ ಮಾಡಿದ ಪಾಪಿಗಳನ್ನು ಕೊಂದೆನಾದರೂ ನ್ಯಾಯದ ದೃಷ್ಟಿಯಿಂದ ನಾನೂ ಅಪರಾಧಿಯೇ, ಕೊಲೆಗಾರನೇ. ನನಗೂ ಶಿಕ್ಷೆ ಖಂಡಿತವೇ. ಆದ್ದರಿಂದ ನನ್ನನ್ನು ನಾನೇ ಶಿಕ್ಷಿಸಿಕೊಳ್ಳುತ್ತೇನೆ. ಅದಕ್ಕಾಗಿ ನನ್ನ ಕೈಲಿ ಸಿದ್ಧವಾಗಿದೆ, ಅಜಯನ ರಿವಾಲ್ವರ್.

"ಸಮಾಜದ ಗಣ್ಯವ್ಯಕ್ತಿಗಳಾಗಿದ್ದ ನೀಚರನ್ನು ಶಿಕ್ಷಿಸಿದ ಮತ್ತು ಗೂಢವಾದ ರಹಸ್ಯವೊಂದನ್ನು ಸೃಷ್ಟಿಸಿದ ತೃಪ್ತಿ ಈಗ ನನಗುಂಟಾಗಿದೆ—"

—ಧರ್ಮಸಿಂಗ್.



